CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೪೦ | ಬೆಂಗಳೂರು, ಗುರುವಾರ, ಜುಲೈ ೨೧, ೨೦೦೫ (ಆಷಾಢ ೩೦, ಶಕ ವರ್ಷ ೧೯೨೭) | ಸಂಚಿಕೆ ೨೯ |
|---|---|---|



## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

### ಅಧಿಸೂಚನೆ

**ನಂ. ಎಲ್‌ಆರ್‌ಎಫ್ (ಕಲಂ 109) ಸಿಆರ್ 17: 2004-05 ದಿನಾಂಕ: 20ನೇ ಜೂನ್ 2005**

ಗೌರಿಬಿದನೂರು ತಾಲ್ಲೂಕು, ಕಸಬಾ ಹೋಬಳಿ, ಮಾದನಹಳ್ಳಿ ಗ್ರಾಮದ ಸ.ನಂ. 31/3ರಲ್ಲಿ 0-09 3/4 ಗುಂಟೆ ಮತ್ತು ಸ.ನಂ.32/3 ರಲ್ಲಿ 0-07 3/4 ಗುಂಟೆ ಹೀಗೆ ಒಟ್ಟು 0-17 1/2 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)ರಡಿಯಲ್ಲಿ ಅನುಮತಿಯನ್ನು ನೀಡಲು ಕೋರಿ ಅಧ್ಯಕ್ಷರು St. Annes Society (Southern Region) (Madras) Chennai ರವರು ನಮೂನೆ 15ಎ ರಲ್ಲಿ ಅಗತ್ಯ ದಾಖಲೆಗಳೊಂದಿಗೆ ಅರ್ಜಿಯನ್ನು ಸಲ್ಲಿಸಿದ್ದು ಇದರಂತೆ ತಹಶೀಲ್ದಾರ್ ಗೌರಿಬಿದನೂರು ತಾಲ್ಲೂಕು ರವರು ನಂ. ಎಲ್‌ಆರ್‌ಎಫ್. ಸಿಆರ್: 196/2004-05 ದಿನಾಂಕ: 22.3.2005 ರಂತೆ ಕಡತ ತಯಾರಿಸಿ ಸಲ್ಲಿಸಿರುವ ಪ್ರಸ್ತಾವನೆಯನ್ನು ಸಹಾಯಕ ಕಮೀಷನರ್ ಚಿಕ್ಕಬಳ್ಳಾಪುರ ಉಪ ವಿಭಾಗ ರವರು ಪರಿಶೀಲಿಸಿ ಮೇಲ್ಕಂಡ ಜಮೀನನ್ನು ಕ್ರಯಕ್ಕೆ ಪಡೆಯಲು ಅರ್ಜಿದಾರರಿಗೆ ಅನುಮತಿಯನ್ನು ನೀಡಲು ಪತ್ರ ನಂ. ಎಲ್‌ಆರ್‌ಎಫ್: ಸಿಆರ್:73/2004-05 ದಿನಾಂಕ: 28.03.2005 ರಂತೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿರುತ್ತೆ. ಮಾದನಹಳ್ಳಿ ಗ್ರಾಮದ ಸ.ನಂ. 31/3ರ 0-09 3/4 ಗುಂಟೆ ಮತ್ತು ಸ.ನಂ.32/3ರ 0-07 3/4 ಗುಂಟೆ ಜಮೀನು ಹೂವಿನ ಆಂಜನಪ್ಪ ಎಂಬುವವರ ಹೆಸರಿನಲ್ಲಿರುತ್ತೆ. ಈ ಜಮೀನುಗಳನ್ನು ಅರ್ಜಿದಾರರಿಗೆ ಕ್ರಯಕ್ಕೆ ನೀಡಲು ಒಪ್ಪಿ ಕರಾರು ಪತ್ರವನ್ನು ಬರೆಸಿಕೊಟ್ಟಿರುತ್ತಾರೆ. ಪ್ರಸ್ತಾಪಿತ ಜಮೀನುಗಳು ಹಿಡುವಳಿ ಜಮೀನುಗಳಾಗಿರುತ್ತೆ ಸದರಿ ಜಮೀನುಗಳು ಭೂ ಮಂಜೂರಾತಿ ನಿಯಮಗಳಿಗೆ ಭೂ ಸುಧಾರಣೆ ಕಾಯ್ದೆ ಇನಾಂ ರದ್ದಿಯಾತಿ ಕಾಯಿದೆ ಮತ್ತು ಪಿಟಿಸಿಎಲ್ ಕಾಯಿದೆಯ ವ್ಯಾಪ್ತಿಗೆ ಒಳಪಟ್ಟಿರುವುದಿಲ್ಲ. ಮೇಲ್ಕಂಡ ಜಮೀನಿಗೆ ಸಂಬಂಧಿಸಿದಂತೆ ಯಾರೂ ಗೇಣಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

St. Annes Society (Southern Region) (Madras) Chennai ಈ ಸಂಘವು Tamil Nadu Societies Registration Act 1975 (Tamil Nadu Act 27 of 1975)ರ ಅಡಿಯಲ್ಲಿ ನಂ. 306/1993 ರಂತೆ ದಿನಾಂಕ: 19.11.1993 ರಂತೆ ನೋಂದಾವಣೆಯಾಗಿರುತ್ತೆ. ಈ ಸಂಘವು ನಿರ್ದೇಶಕರು (ಪ್ರಾಥಮಿಕ ಶಿಕ್ಷಣ) ಹಾಗೂ ನೋಂದಣಿ ಅಧಿಕಾರಿಗಳು ನೃಪತುಂಗ ರಸ್ತೆ ಬೆಂಗಳೂರು ರವರ ಕಛೇರಿಯಲ್ಲಿ ನಂ. ಸಿ7 (1) ಪ್ರಾ.ಶಿ.ಅ. ನೋಂದಣಿ 06/2004-05 ದಿನಾಂಕ: 26.5.2004 ರಂತೆ ನೋಂದಣಿಯಾಗಿರುತ್ತೆ. ಕ್ಷೇತ್ರ ಶಿಕ್ಷಣಾಧಿಕಾರಿಗಳು ಗೌರಿಬಿದನೂರು ರವರ ಪ್ರಮಾಣ ಪತ್ರ ನಂ. 28/2002-03 ದಿನಾಂಕ: 24.4.2004 ರಂತೆ ಮತ್ತು ಜ್ಞಾಪನ ನಂ. ಸಿ 1 ಮಾನ್ಯತೆ 1/2004-05/15 ದಿನಾಂಕ: 24.4.2004 ರಂತೆ ಅರ್ಜಿದಾರರ ಸಂಸ್ಥೆಗೆ ಮಾನ್ಯತೆಯನ್ನು ನೀಡಿ ನೋಂದಾಯಿಸಿರುತ್ತೆ. ಅರ್ಜಿದಾರರು ಮೇಲ್ಕಂಡ ಜಮೀನುಗಳನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಉದ್ದೇಶಿಸಿದ್ದು ಇವರು ಹಾಜರುಪಡಿಸಿರುವ ದಾಖಲೆಗಳು ಪ್ರಸ್ತಾಪಿತ ಉದ್ದೇಶಕ್ಕೆ ಪೂರಕವಾಗಿರುತ್ತೆ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1) ರಂತೆ ಶೈಕ್ಷಣಿಕ ಉದ್ದೇಶಕ್ಕಾಗಿ 4 ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಹೊಂದಲು ಅವಕಾಶವನ್ನು ಕಲ್ಪಿಸಿದ್ದು ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)ಕ್ಕೆ ತಿದ್ದುಪಡಿಯನ್ನು ತಂದಿರುತ್ತೆ. (ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯ್ದೆ 2002) ಇದರಂತೆ ಶೈಕ್ಷಣಿಕ ಉದ್ದೇಶಕ್ಕಾಗಿ 2 ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಕ್ರಯಕ್ಕೆ ಪಡೆಯಲು/ದಾನವಾಗಿ ಪಡೆಯಲು ಅನುಮತಿ/ ವಿನಾಯ್ತಿಯನ್ನು ನೀಡುವ ಅಧಿಕಾರವನ್ನು ಜಿಲ್ಲಾಧಿಕಾರಿಗಳಿಗೆ ನೀಡಿರುತ್ತೆ. ಇದರಂತೆ ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)ಕ್ಕೆ

ಅನುಗುಣವಾಗಿರುವುದರಿಂದ ಗೌರಿಬಿದನೂರು ತಾಲ್ಲೂಕು ಕಸಬ ಹೋಬಳಿ ಮಾದನಹಳ್ಳಿ ಗ್ರಾಮದ ಸ.ನಂ.31/3 ರ 0-09 3/4 ಗುಂಟೆ ಮತ್ತು 32/3ರ 0-07 3/4 ಗುಂಟೆ ಹೀಗೆ ಒಟ್ಟು 0-17 1/2 ಗುಂಟೆ (ಹದಿನೇಳುವರೆ ಗುಂಟೆ) ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಅಧ್ಯಕ್ಷರು St. Annes Society Southern Region (Madras) Chennai ರವರಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)ರ ಅಡಿಯಲ್ಲಿ ಅನುಮತಿಯನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಕ್ರಯಕ್ಕೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು 2 ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಹಾಗೂ ಈ ಬಗ್ಗೆ ಲಿಖಿತ ಮುಲಕ ಮಾಹಿತಿಯನ್ನು ಈ ಕಛೇರಿಗೆ ನೀಡತಕ್ಕದ್ದು.
2. ವಿನಾಯಿತಿ: ಅನುಮತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಾಗಿ ಅಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯ್ದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ (ಸಕ್ಷಮ ಪ್ರಾಧಿಕಾರದಿಂದ) ಅನುಮತಿ ಪಡೆಯಬೇಕು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ: ಓಡಿಪಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಒಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
5. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು. ಮತ್ತು ಪ್ರಸ್ತಾಪಿತ ಜಮೀನನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.
6. ಈ ಅನುಮತಿಯು ಭೂ ಸುಧಾರಣಾ ಕಾಯ್ದೆ 1961ರ ಕಲಂ 109 (I) (II) ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಜಿಲ್ಲಾಧಿಕಾರಿಗಳು,
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್.893

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ

### ನಂ. ಎಲ್ಎನ್ಡಿ (ಎನ್)ಸಿಆರ್ 102: 2004-05 ದಿನಾಂಕ: 22ನೇ ಜೂನ್ 2005

**ವಿಯಷ :** ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಲಗ್ಗೆರೆ ಗ್ರಾಮದ ಸರ್ವೆ ನಂ. 50 ರಲ್ಲಿ 2.20 ಎಕರೆ: ಗುಂಟೆ ಜಮೀನನ್ನು ಶ್ರೀ ಮಡಿವಾಳ ಮಾಚಿದೇವರ ಅಭಿವೃದ್ಧಿ ಸಂಘಕ್ಕೆ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ :** 1. ಸರ್ಕಾರದ ಪತ್ರದ ಸಂಖ್ಯೆ ಆರ್‌ಡಿ 523 ಎಲ್‌ಜಿಬಿ 04 ದಿನಾಂಕ: 6.4.2005

2. ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು ಅವರ ಪತ್ರದ ಸಂಖ್ಯೆ: ಎಲ್ಎನ್‌ಡಿ: ಸಿಆರ್ 163/ 04-05 ದಿನಾಂಕ: 19.11.04.

ವಿಷಯಕ್ಕೆ ಸಂಬಂಧಿಸಿದಂತೆ, ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಲಗ್ಗೆರೆ ಗ್ರಾಮದ ಸರ್ವೆ ನಂ. 50ರಲ್ಲಿ 2.20 ಎಂ.ಗುಂ ಸರ್ಕಾರಿ ಜಮೀನನ್ನು ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71 ರಡಿ ಬಟ್ಟೆ ಒಗೆಯುವ ದೋಬಿ ಘಾಟಿಗೆ ಉಪಯೋಗಿಸುವ ಸಲುವಾಗಿ ಕಾಯ್ದಿರಿಸಲು ಉಲ್ಲೇಖದ ಸರ್ಕಾರದ ಪತ್ರದಲ್ಲಿ ಸರ್ಕಾರದ ಪೂರ್ವಾನುಮತಿ ನೀಡಲಾಗಿದೆ.

ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಲಗ್ಗೆರೆ ಗ್ರಾಮದ ಸರ್ವೆ ನಂ. 50ರಲ್ಲಿ 2.20 ಎಕರೆ ಸರ್ಕಾರಿ ಜಮೀನನ್ನು ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71 ರಡಿ ಬಟ್ಟೆ ಒಗೆಯುವ ದೋಬಿ ಘಾಟಿಗಾಗಿ ಮಾತ್ರ ಉಪಯೋಗಿಸುವ ಸಲುವಾಗಿ ಕಾಯ್ದಿರಿಸಿದೆ. ಹಾಗೂ ಸದರಿ ಸಂಸ್ಥೆಗೆ ಜಮೀನಿನ ಮೇಲೆ ಯಾವುದೇ ಅಧಿಕಾರ ಇರುವುದಿಲ್ಲ.

ವಿಶೇಷ ಜಿಲ್ಲಾಧಿಕಾರಿಗಳು, (ಕಂ),
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.895

## ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

### ಅಧಿಸೂಚನೆ

### ಸಂಖ್ಯೆ: 11:ಸಂವಿ:ಸಿಓಪಿ:2005 ದಿನಾಂಕ: 16ನೇ ಮೇ 2005

ಬೆಂಗಳೂರು ನಗರ ಮಹಾತ್ಮಗಾಂಧಿ ರಸ್ತೆಯಲ್ಲಿ ಕಾವೇರಿ ಕರಕುಶಲ ವೃತ್ತದ ಕಡೆಯಿಂದ ಬರುವ ವಾಹನಗಳ ಪೈಕಿ ಹೆಚ್ಚಿನ ವಾಹನಗಳು ಮೇಯೋಹಾಲ್ ಜಂಕ್ಷನ್‌ನಲ್ಲಿ ರೆಸಿಡೆನ್ಸಿ ರಸ್ತೆಗೆ ಬಲ ತಿರುವು ಪಡೆದು ನಂತರ ಕಮೀಸರಿಯೇಟ್ ರಸ್ತೆಗೆ ಎಡ ತಿರುವು ಪಡೆದು ಮುಂದೆ ಹೋಗುತ್ತಿರುತ್ತವೆ. ಮೆಯೋಹಾಲ್ ಜಂಕ್ಷನ್ "ವೈ" ಜಂಕ್ಷನ್ ಆಗಿದ್ದು ಎಂ.ಜಿ. ರಸ್ತೆಯಲ್ಲಿ ಪೂರ್ವದಿಂದ ಬಂದ ಎಲ್ಲಾ ತರಹದ ವಾಹನಗಳು ರೆಸಿಡೆನ್ಸಿ ರಸ್ತೆಗೆ ಎಡ ತಿರುವು ಪಡೆದು ಕಮೀಸರಿಯೇಟ್ ರಸ್ತೆಗೆ ಹೋಗುವ ಸಮಯದಲ್ಲಿ ವಿಳಂಬವಾಗುತ್ತಿದ್ದು ಸಂಚಾರ ಸ್ಥಗಿತಗೊಳ್ಳುವುದಲ್ಲದೆ ಪಾದಚಾರಿಗಳೂ ಸಹ ರಸ್ತೆಗಳನ್ನು ದಾಟಲು ಕಷ್ಟಕರವಾಗಿರುತ್ತದೆ. ಪ್ರಯುಕ್ತ ಮೇಯೋಹಾಲ್ ಜಂಕ್ಷನ್‌ನಲ್ಲಿ ವಾಹನಗಳು ಸುಗಮವಾಗಿ ಸಂಚರಿಸಲು ಮತ್ತು ಪಾದಚಾರಿಗಳು ಸಹ ಸುಗಮವಾಗಿ ರಸ್ತೆಯನ್ನು ದಾಟಲು ಅನುವು ಮಾಡಿಕೊಡುವ ಸಲುವಾಗಿ ಎಂ.ಜಿ. ರಸ್ತೆಯಿಂದ ಬಲ ತಿರುವು ಪಡೆದು ರೆಸಿಡೆನ್ಸಿ ರಸ್ತೆಗೆ ಹೋಗುವ ಎಲ್ಲಾ ತರಹದ ವಾಹನಗಳನ್ನು ನಿಷೇಧಿಸುವುದು ಹಾಗೂ ಬಿ.ಎಂ.ಟಿ.ಸಿ. ವಾಹನಗಳಿಗೆ ಪರ್ಯಾಯ ಸಂಚಾರ ವ್ಯವಸ್ಥೆಯನ್ನು ಮಾಡಿಕೊಡುವುದು ಅವಶ್ಯಕವಾಗಿರುತ್ತದೆ.

ಹಾಗೂ ರೆಸಿಡೆನ್ಸಿ ರಸ್ತೆ ಅಪೇರಾ ವೃತ್ತದಿಂದ ಅಶೋಕನಗರ ಹಳೇ ಪೊಲೀಸ್ ಠಾಣೆ ಜಂಕ್ಷನ್ ವರೆಗಿನ ಬ್ರಿಗೇಡ್ ರಸ್ತೆಯು ಕಿರಿದಾಗಿದ್ದು ಈ ರಸ್ತೆಯ ಪಶ್ಚಿಮ ಭಾಗದಲ್ಲಿ ವಾಹನಗಳ ನಿಲುಗಡೆ ಇರುವುದರಿಂದ ಬ್ರಿಗೇಡ್ ರಸ್ತೆಯಿಂದ ಬಂದ ವಾಹನಗಳು ನೇರವಾಗಿ ಮತ್ತು ರೆಸಿಡೆನ್ಸಿ ರಸ್ತೆಯಿಂದ ಬಂದು ಬಲ ತಿರುವು ಪಡೆದು ಸಾಗುವ ವಾಹನಗಳ ಸುಗಮ ಸಂಚಾರಕ್ಕೆ ಅಡಚಣೆ ಉಂಟಾಗುತ್ತಿರುವುದಲ್ಲದೆ ಆಗಾಗ್ಗೆ ಸಂಚಾರ ಸ್ಥಗಿತಗೊಳ್ಳುತ್ತಿರುತ್ತೆ. ಪ್ರಯುಕ್ತ ಸದರಿ ಭಾಗದಲ್ಲಿ ವಾಹನಗಳು ಸುಗಮವಾಗಿ ಸಂಚರಿಸಲು ರಸ್ತೆಯ ಪಶ್ಚಿಮ ಭಾಗದಲ್ಲಿನ ವಾಹನ ನಿಲುಗಡೆಯನ್ನು ನಿಷೇಧಿಸಿ ರಸ್ತೆಯ ಪೂರ್ಣ ಭಾಗವನ್ನು ವಾಹನಗಳ ಸಂಚಾರಕ್ಕೆ ಅನುವು ಮಾಡಿಕೊಡುವುದು ಅವಶ್ಯಕವಾಗಿರುತ್ತೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧಗಳನ್ನು ಆದೇಶಿಸಿರುತ್ತೇನೆ.

1. ಮಹಾತ್ಮಗಾಂಧಿ ರಸ್ತೆಯಲ್ಲಿ ಕಾವೇರಿ ಕರಕುಶಲ ವೃತ್ತದ ಕಡೆಯಿಂದ ಬರುವ ವಾಹನಗಳಿಗೆ ಮೇಯೋಹಾಲ್ "ವೈ" ಜಂಕ್ಷನ್‌ನಲ್ಲಿ ಬಲ ತಿರುವು ಪಡೆಯುವುದನ್ನು ನಿಷೇಧಿಸಲಾಗಿದೆ. ಇಲ್ಲಿ ಬಲ ತಿರುವು ಪಡೆದು ಸಂಚರಿಸುತ್ತಿದ್ದ ಬಿ.ಎಂ.ಟಿ.ಸಿ ಬಸ್ಸುಗಳಿಗೆ ಪರ್ಯಾಯವಾಗಿ ಸಿ.ಟಿ.ಓ ವೃತ್ತದಿಂದ ಕ್ವೀನ್ಸ್ ರಸ್ತೆ ಮುಖಾಂತರ ಅನಿಲ್‌ಕುಂಬ್ಳೆ ವೃತ್ತದಲ್ಲಿ ಬಲ ತಿರುವು ಪಡೆದು ಸೆಂಟ್ ಮಾರ್ಕ್ಸ್ ರಸ್ತೆಯಲ್ಲಿ ಸಾಗಿ ಎಸ್.ಬಿ.ಐ ಜಂಕ್ಷನ್‌ನಲ್ಲಿ ಎಡ ತಿರುವು ಪಡೆದು ಮ್ಯೂಸಿಯಂ ರಸ್ತೆಯಲ್ಲಿ ಸಾಗಿ ಆಶೀರ್ವಾದಂ ವೃತ್ತದಲ್ಲಿ ಎಡ ತಿರುವು ಪಡೆದು ರೆಸಿಡೆನ್ಸಿ ರಸ್ತೆಯ ಮೂಲಕ ಮೇಯೋಹಾಲ್ ಕಡೆಗೆ ಸಾಗಲು ಅನುವು ಮಾಡಿಕೊಡಲಾಗಿದೆ.
2. ರೆಸಿಡೆನ್ಸಿ ರಸ್ತೆಯ ಅಪೇರಾ ವೃತ್ತದಿಂದ ಅಶೋಕನಗರ ಹಳೇ ಪೊಲೀಸ್ ಠಾಣೆ ಜಂಕ್ಷನ್ ವರೆಗೆ ಬ್ರಿಗೇಡ್ ರಸ್ತೆಯಲ್ಲಿ ರಸ್ತೆಯ ಎರಡೂ ಕಡೆಗಳಲ್ಲಿ ದಿನದ 24 ಗಂಟೆಗಳ ಕಾಲ ವಾಹನ ನಿಲುಗಡೆಯನ್ನು ಪೂರ್ಣವಾಗಿ ನಿಷೇಧಿಸಲಾಗಿದೆ.
3. ಮ್ಯೂಸಿಯಂ ರಸ್ತೆಯಲ್ಲಿ ಅಶೋಕನಗರದ ಹಳೇ ಪೊಲೀಸ್ ಠಾಣೆ ಜಂಕ್ಷನ್‌ನಿಂದ ಪ್ರೊಫೆಸರ್ ಆಶೀರ್ವಾದಂ ವೃತ್ತದವರೆಗೆ ದ್ವಿಚಕ್ರ ವಾಹನಗಳ ನಿಲುಗಡೆಗೆ ಅವಕಾಶ ಕಲ್ಪಿಸಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 25.05.2005 ರಿಂದ ಪ್ರಾಯೋಗಿಕವಾಗಿ ಒಂದು ತಿಂಗಳ ಕಾಲ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 16.5.2005 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

ಪಿ.ಆರ್.897

## ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

## ಅಧಿಸೂಚನೆ

### ಸಂಖ್ಯೆ: 10:ಸಂವಿ:ಸಿಓಪಿ:2005 ದಿನಾಂಕ: 20ನೇ ಏಪ್ರಿಲ್ 2005

ಬೆಂಗಳೂರು ನಗರ ಮಹಾತ್ಮಗಾಂಧಿ ರಸ್ತೆಯಲ್ಲಿನ ಕಾವೇರಿ ಕರಕುಶಲ ವೃತ್ತದಿಂದ ರೆಸಿಡೆನ್ಸಿ ರಸ್ತೆಯ ಅಪೇರಾ ವೃತ್ತದವರೆಗೆ ಇರುವ ಬ್ರಿಗೇಡ್ ರಸ್ತೆಯು ಕಿರಿದಾಗಿದ್ದು, ಈ ರಸ್ತೆಯ ಎರಡೂ ಕಡೆಗಳಲ್ಲಿ ಚಿಕ್ಕದಾದ ಪಾದಚಾರಿ ರಸ್ತೆಗಳನ್ನು ಹೊಂದಿರುತ್ತದೆ. ಅಲ್ಲದೆ ರಸ್ತೆಯ ಎರಡೂ ಕಡೆಗಳಲ್ಲಿ ಪ್ರತಿಷ್ಠಿತ ವಾಣಿಜ್ಯ ಮಳಿಗೆಗಳನ್ನು ಹೊಂದಿದ್ದು ಇಲ್ಲಿಗೆ ದೇಶಿ ಮತ್ತು ವಿದೇಶಿ ಪ್ರವಾಸಿಗರನ್ನು ಹಾಗೂ ಗ್ರಾಹಕರನ್ನು ಹೆಚ್ಚಿನ ಸಂಖ್ಯೆಯಲ್ಲಿ ಸೆಳೆಯುತ್ತಿದ್ದು ಸಹಜವಾಗಿಯೇ ಪಾದಚಾರಿಗಳ ಸಂಖ್ಯೆಯು ಹೆಚ್ಚಾಗಿರುತ್ತೆ. ಕಾವೇರಿ ಕರಕುಶಲ ಕಡೆಯಿಂದ ಅಪೇರಾ ವೃತ್ತದ ಕಡೆಗೆ ವಾಹನಗಳಿಗೆ ಏಕಮುಖ ಸಂಚಾರ ವ್ಯವಸ್ಥೆ ಇದ್ದಾಗ್ಯೂ ಈ ರಸ್ತೆಯಲ್ಲಿ ಪೂರ್ವ ದಿಕ್ಕಿಗೆ ವಾಹನಗಳಿಗೆ ಆಂಗ್ಯುಲರ್ ಪಾರ್ಕಿಂಗ್ ವ್ಯವಸ್ಥೆ ಇರುವುದರಿಂದ ಇದಕ್ಕಾಗಿ ರಸ್ತೆಯ ಹೆಚ್ಚಿನ ಭಾಗವನ್ನು ವಾಹನಗಳ ನಿಲುಗಡೆಗೆ ಉಪಯೋಗವಾಗುತ್ತಿರುವುದರಿಂದ ವಾಹನಗಳು ಸುಗಮವಾಗಿ ಸಂಚರಿಸದೆ ಆಗಾಗ್ಗೆ ಸ್ಥಗಿತಗೊಂಡು ಸಂಚಾರ ಅಸ್ತವ್ಯಸ್ಥಗೊಳ್ಳುತ್ತಿರುತ್ತೆ. ಪ್ರಯುಕ್ತ ಈ ರಸ್ತೆಯಲ್ಲಿನ ಆಂಗ್ಯುಲರ್ ಪಾರ್ಕಿಂಗ್ ಅನ್ನು ಪ್ಯಾರಲಲ್ ಪಾರ್ಕಿಂಗ್ ಆಗಿ ಮಾರ್ಪಡಿಸಿ ರಸ್ತೆಯ ಹೆಚ್ಚಿನ ಭಾಗವನ್ನು ಸಂಚಾರಕ್ಕೆ ಅನುವು ಮಾಡಿಕೊಡುವುದು ಅಗತ್ಯವಾಗಿ ಕಂಡುಬಂದಿರುತ್ತೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಬ್ರಿಗೇಡ್ ರಸ್ತೆಯಲ್ಲಿ ವಾಹನ ನಿಲುಗಡೆಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಆದೇಶಿಸಿರುತ್ತೇನೆ.

"ಮಹಾತ್ಮಗಾಂಧಿ ರಸ್ತೆಯ ಕಾವೇರಿ ಕರಕುಶಲ ವೃತ್ತದಿಂದ ರೆಸಿಡೆನ್ಸಿ ರಸ್ತೆಯ ಅಪೇರಾ ವೃತ್ತದವರೆಗಿನ ಬ್ರಿಗೇಡ್ ರಸ್ತೆಯಲ್ಲಿ ಪೂರ್ವ ಭಾಗಕ್ಕೆ ಇರುವ ಆಂಗ್ಯುಲರ್ ಪಾರ್ಕಿಂಗ್‌ಅನ್ನು ನಿಷೇಧಿಸಿ ಪ್ಯಾರಲಲ್ ಪಾರ್ಕಿಂಗ್‌ಗೆ ಅವಕಾಶ ನೀಡಿ ವಾಹನಗಳನ್ನು ನಿಲುಗಡೆ ಮಾಡಲು ಆದೇಶಿಸಲಾಗಿದೆ" ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 23.04.2005 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 20.04.2005 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**
ಪೊಲೀಸ್ ಕಮೀಷನರ್, ಬೆಂಗಳೂರು ನಗರ.

ಪಿ.ಆರ್.898

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಪ್ರಕರಣ ಸಂಖ್ಯೆ: ಕಾಪಕ:ಕಸ:29:05 ದಿನಾಂಕ: 23ನೇ ಜೂನ್ 2005**

**ಅರ್ಜಿದಾರರು:**

1. ಆರುಳಪ್ಪನ್ ಬಿನ್ ಚಿನ್ನಪ್ಪಯ್ಯ
2. ಅಂತೋಣಿಯಮ್ಮ ಕೋಂ ಆರುಳಪ್ಪನ್
   ವಾಸ: ಹೊಸೂಡಿ ಫಾರಂ ನಿದಿಗೆ ಹೋಬಳಿ
   ಹೊಸೂಡಿ ಅಂಚೆ ಶಿವಮೊಗ್ಗ ತಾ:

**ವಿರುದ್ಧ**

**ಪ್ರತಿವಾದಿಗಳು:**

1. ಶ್ರೀ ಎಸ್. ಆರ್. ಫೀಟರ್ ಬಿನ್ ರತ್ನ ಸ್ವಾಮಿ, ಧರ್ಮಾಧಿಕಾರಿಗಳು ಸೆಕ್ರೆಟ್‌ಹಾರ್ಟ್ ಚರ್ಚ್ ಬಿ.ಹೆಚ್. ರಸ್ತೆ ಶಿವಮೊಗ್ಗ.
2. ಆರೋಕ್ಯ ಮೇರಿ ಅಲಿಯಾಸ್ ಸವಿತಾ ಕೋಂ ದಿವಗಂತ ಜಾನ್ ಫ್ರಾನ್ಸಿಸ್, ಬಿನ್ ಅಂತೋಣಿ ಪ್ಯಾಟ್ರಿಕ್ ಡ್ರೈವರ್, ಓಲ್ಡ್‌ಬಾರ್‌ಲೈನ್ ರಸ್ತೆ, ಶಿವಮೊಗ್ಗ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದು ಏನೆಂದರೆ, ಮೃತ ಜಾನ್ ಫ್ರಾನ್ಸಿಸ್ ರವರು ಪ್ರತಿವಾದಿಯವರಲ್ಲಿ ರಿಪೇರಿ ಕೆಲಸದ ಮೇಲೆ ಇದ್ದಾಗ 31.12.04 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿನಾಂಕ: 30.05.05 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾನೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದು ಏನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸಗಳ ಒಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ, ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್.899

**ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ನಡವಳಿಗಳು**

**ವಿಷಯ :** ಶ್ರೀ ಅರ್ಜುನ ಎಂ. ಹರಿಜನ, ವಾಹನ ಚಾಲಕರು, ರಾಷ್ಟ್ರೀಯ ಕುಷ್ಠರೋಗ ನಿವಾರಣಾ ಕೇಂದ್ರ, ರಾಮದುರ್ಗ, ಬೆಳಗಾವಿ ಜಿಲ್ಲೆ, ಇವರ ಅನಧಿಕೃತ ಗೈರುಹಾಜರಿ ಆರೋಪದ ಬಗ್ಗೆ ಇಲಾಖಾ ವಿಚಾರಣೆ ಅಂತಿಮ ಆದೇಶ.

**ಓದಲಾಗಿದೆ :**

1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರ ಸಂಖ್ಯೆ: ಡಿಪಿಎನ್(12): ಸಿಆರ್-40: 2000-01, ದಿನಾಂಕ: 02.09.2001.
2. ಡಿಪಿಎನ್ (12): ಸಿಆರ್-50: 1994-95, ದಿನಾಂಕ: 29.10.2001.
3. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶದ ಸಂಖ್ಯೆ:ಡಿಪಿಎನ್(12):ಸಿಆರ್:40:2000-01, ದಿನಾಂಕ: 29.10.2001
4. ಡಿಪಿಎನ್ (12): ಸಿಆರ್:50:1994-95, ದಿನಾಂಕ: 27.02.2002.
5. ವಿಚಾರಣಾ ವರದಿಯ ಸಂಖ್ಯೆ: ವಿ.ಅ. ವಿಚಾರಣೆ ಎನ್‌ಬಿ: 100: 2001-02, ದಿನಾಂಕ: 27.03.2004.
6. ಸಂಖ್ಯೆ: ವಿ.ಅ.: ವಿಚಾರಣೆ: ಎನ್‌ಬಿ:165: 2002-03, ದಿನಾಂಕ: 13.12.2002.
7. ನೌಕರರಿಂದ ಸ್ವೀಕೃತಿ ದಿನಾಂಕ: 30.05.2004.
8. ನೌಕರರಿಂದ ಸ್ವೀಕೃತಿ ದಿನಾಂಕ: 01.05.2004.

**ಪ್ರಸ್ತಾವನೆ:**

ಶ್ರೀ ಅರ್ಜುನ ಎಂ. ಹರಿಜನ, ವಾಹನ ಚಾಲಕರು, ಇವರು ಈ ಹಿಂದೆ ಪ್ರಾಥಮಿಕ ಆರೋಗ್ಯ ಕೇಂದ್ರ, ಕಾಗವಾಡ, ಬೆಳಗಾವಿ ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ: 11.02.1994 ರಿಂದ ದಿನಾಂಕ: 23.02.1995 ರವರೆಗೆ ಹಾಗೂ ರಾಷ್ಟ್ರೀಯ ಕುಷ್ಠರೋಗ ನಿವಾರಣಾ ಕೇಂದ್ರ, ರಾಮದುರ್ಗ, ಬೆಳಗಾವಿ ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ: 18.12.1996 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರು ಹಾಜರಿಯ ಆರೋಪದ ಬಗ್ಗೆ ಮೇಲೆ ಓದಲಾದ (1) ಮತ್ತು (2)ರಲ್ಲಿ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಇದಕ್ಕೆ ಅನುಗುಣವಾಗಿ ನೌಕರರು ತಮ್ಮ ರಕ್ಷಣಾ ಹೇಳಿಕೆ ಸಲ್ಲಿಸದೇ ಇರುವುದರಿಂದ, ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ, ಮೇಲೆ ಓದಲಾದ (3) ಮತ್ತು (4)ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತ ಅಧಿಕಾರಿಗಳು (ಜಾಗೃತ ಕೋಶ), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದಂತೆ, ಮೇಲೆ ಓದಲಾದ (5) ಮತ್ತು (6)ರಲ್ಲಿನ ಆದೇಶದಂತೆ, ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ ನೌಕರರ ಮೇಲಿನ ಅನಧಿಕೃತ ಗೈರುಹಾಜರಿ ಆರೋಪವು ಸಂಪೂರ್ಣವಾಗಿ ಸಾಬೀತಾಗಿದೆ ಎಂದು ತಿಳಿಸಿರುತ್ತಾರೆ. ವಿಚಾರಣಾ ವರದಿಯ ಪ್ರತಿಯನ್ನು ಮೇಲೆ ಓದಲಾದ (7) ಮತ್ತು (8)ರಲ್ಲಿ ಸೂಚನಾ ಪತ್ರದ ಮೂಲಕ ನೌಕರರಿಗೆ ಜಾರಿ ಮಾಡಲಾಗಿದೆ. ಅದಕ್ಕೆ ಅನುಗುಣವಾಗಿ ನೌಕರರು ತಮ್ಮ ಲಿಖಿತ ಅಹವಾಲನ್ನು ಸಲ್ಲಿಸದೇ ಸ್ವೀಕೃತಿಯನ್ನು ಮಾತ್ರ ಸಲ್ಲಿಸಿರುತ್ತಾರೆ.

ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ತರುವಾಯ ನೌಕರರ ಅನಧಿಕೃತ ಗೈರುಹಾಜರಿ ಆರೋಪವು ಸಂಪೂರ್ಣವಾಗಿ ಸಾಬೀತಾದ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶದ ಸಂಖ್ಯೆ: ಡಿಪಿಎನ್ (12): ಸಿಆರ್:50:1994-95, ಬೆಂಗಳೂರು ದಿನಾಂಕ: 14ನೇ ಜೂನ್ 2005**

**ಆದೇಶದ ಸಂಖ್ಯೆ: ಡಿಪಿಎನ್ (12: ಸಿಆರ್:40:2000-01, ಬೆಂಗಳೂರು, ದಿನಾಂಕ: 14ನೇ ಜೂನ್ 2005**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೊಹಮ್ಮದ್ ಸನಾವುಲ್ಲ, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಆದ ನಾನು ಶ್ರೀ ಅರ್ಜುನ ಎಂ. ಹರಿಜನ, ವಾಹನ ಚಾಲಕರು, ರಾಷ್ಟ್ರೀಯ ಕುಷ್ಠರೋಗ ನಿವಾರಣಾ ಕೇಂದ್ರ, ರಾಮದುರ್ಗ, ಬೆಳಗಾವಿ ಜಿಲ್ಲೆ, ಇವರು ದಿನಾಂಕ: 11.02.1994 ರಿಂದ ದಿನಾಂಕ: 23.02.1995 ರವರೆಗೆ ಹಾಗೂ ದಿನಾಂಕ: 18.12.1996 ರಿಂದ ಈವರೆಗೆ ಅನಧಿಕೃತವಾಗಿ ಗೈರುಹಾಜರಿಯಾಗಿರುವ ಆರೋಪಗಳು ಇಲಾಖಾ ವಿಚಾರಣೆಯಿಂದ ದೃಢಪಟ್ಟಿರುವುದರಿಂದ ಸದರಿ ನಿಯಮ 8(Viii) ರ ಪ್ರಕಾರ ಪುನಃ ಸರ್ಕಾರಿ ಸೇವೆಗೆ ಅನರ್ಹರಾಗತಕ್ಕ ರೀತಿಯಲ್ಲಿ ಕೂಡಲೇ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿದ್ದೇನೆ.

**ಮೊಹಮ್ಮದ್ ಸನಾವುಲ್ಲ**
ಆಯುಕ್ತರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು-9.

ಪಿ.ಆರ್.900

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಅಡಿ ಆಯುಕ್ತರು,**
**ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಕಾಅಗ:ಕಾನಪ:ಎಫ್:56/05/264, ದಿನಾಂಕ: 22ನೇ ಜೂನ್ 2005**

**ಅರ್ಜಿದಾರರು:**

1. ಶ್ರೀಮತಿ ನಿಂಗವ್ವ W/o ಮೈಲಾರೆಪ್ಪ ಗುಳೆಪ್ಪನವರ
2. ಕು: ಗೌರವ್ವ D/o ಮೈಲಾರೆಪ್ಪ ಗುಳೆಪ್ಪನವರ
3. ಕು: ಅಶೋಕ S/o ಮೈಲಾರೆಪ್ಪ ಗಳೆಪ್ಪನವರ
4. ಕು: ನೇತ್ರಾ D/o ಮೈಲಾರೆಪ್ಪ ಗುಳೆಪ್ಪನವರ R/o ರಾಮಶಿರಿ ತಾ: ಶಿರಹಟ್ಟಿ ಜಿಲ್ಲೆ, ಗದಗ

**ವಿರುದ್ಧ**

**ಪ್ರತಿವಾದಿಗಳು:**

1. ಶ್ರೀ ಬಿ. ಹರೀಶ್ ಶೆಟ್ಟಿ S/o ಮಹಾಬಲಶೆಟ್ಟಿ R/o ಸಹನಾ ನಿಲಯ ಎಸ್‌ಎಎಸ್ ಕಾಲೇಜ್ ರಸ್ತೆ ಬಂಟ್ವಾಳ ಕಸಬಾ ಗ್ರಾಮ ತಾ: ಬಂಟ್ವಾಳ ಜಿಲ್ಲಾ: ದಕ್ಷಿಣ ಕನ್ನಡ

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ: ನಿಂಗವ್ವ W/o ಮೈಲಾರಪ್ಪ ಗುಳೆಪ್ಪನವರ ಹಾಗೂ ಗೌರವ್ವ, ಅಶೋಕ, ನೇತ್ರಾ, ಇವರು, ತಾವು ಮೃತ ಮೈಲಾರೆಪ್ಪ ಗುಳೆಪ್ಪನವರ ಇವರ ಹೆಂಡತಿ ಮತ್ತು ಮಕ್ಕಳು ಎಂದೂ ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮೈಲಾರಪ್ಪ ಇವರು ಒಂದನೇ ಪ್ರತಿವಾದಿಗಳಾದ ಬಿ. ಹರೀಶ್‌ಶೆಟ್ಟಿ S/o ಮಹಾಬಲಶೆಟ್ಟಿ ಇವರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ಆಶ್ರಿತರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ, ಗದಗ ಜಿಲ್ಲೆ ಗದಗ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು.

ಪಿ.ಆರ್.901

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಅಡಿ ಆಯುಕ್ತರು,**
**ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಕಾಅಗ:ಕಾನಪ:ಎಫ್:46/05/238 ದಿನಾಂಕ: 22ನೇ ಜೂನ್ 2005**

**ಅರ್ಜಿದಾರರು:**

1. ಅನ್ನವ್ವ W/o ಹನಮಂತ ಕೊರವರ ಉರ್ಫ್ ಪೂಜಾರ
2. ಬಸವ್ವ W/o ರವಳಪ್ಪ ಕೊರವರ ಉರ್ಫ್ ಪೂಜಾರ
3. ರವಳಪ್ಪ S/o ಗಂಗಪ್ಪ ಕೊರವರ R/o ಕೊರವರ ಓಣಿ, ನರಗುಂದ

**ವಿರುದ್ಧ**

**ಪ್ರತಿವಾದಿಗಳು:**

1. ಶ್ರೀ ಜಯದೇವ S/o ಶಿದ್ರಾಮಪ್ಪ ಮಮದಾಪುರ ಕಾಲೇಜು ರಸ್ತೆ ಬದಾಮಿ ತಾ: ಬಾಗಲಕೋಟೆ
2. ದಿ ಡಿವಿಜನಲ್ ಮ್ಯಾನೇಜರ್ ನ್ಯಾಶನಲ್ ಇನ್ಸೂರೆನ್ಸ್ ಕಂ.ಲಿ., ಮೆಳ್ಳಿಗೇರಿ ಕಾಂಪ್ಲೆಕ್ಸ್ ಕಲಾದಗಿರಸ್ತೆ ಬಾಗಲಕೋಟೆ-587101
3. ದಿ ಡಿವಿಜನಲ್ ಮ್ಯಾನೇಜರ್ ನ್ಯಾಶನಲ್ ಇನ್ಸೂರೆನ್ಸ್ ಕಂ.ಲಿ., ಸುಜಾತಾ ಕಾಂಪ್ಲೆಕ್ಸ್, ಪಿ.ಬಿ.ರಸ್ತೆ, ಹುಬ್ಬಳ್ಳಿ

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ: 1) ಅನ್ನವ್ವ W/o ಹನುಮಂತಪ್ಪ ಕೊರವರ 2) ಬಸವ್ವ W/o ರವಳಪ್ಪ ಕೊರವರ 3) ರವಳಪ್ಪ S/o ಗಂಗಪ್ಪ ಕೊರವರ ಇವರು, ತಾವು ಮೃತ ಹನುಮಂತಪ್ಪ ಕೊರವರ ಇವರ ಹೆಂಡತಿ ಮತ್ತು ತಾಯಿ, ತಂದೆ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತ ಹನುಮಂತಪ್ಪ ಇವರು ಒಂದನೇ ಪ್ರತಿವಾದಿಗಳಾದ ಶ್ರೀ ಜಯದೇವ ಮಮದಾಪೂರ ಇವರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ

ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ಆಶ್ರಿತರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ, ಗದಗ ಜಿಲ್ಲೆ, ಗದಗ, ಹಾಗೂ
ಪಿ.ಆರ್.902 ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು.

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಅಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ

**ಸಂಖ್ಯೆ: ಕಾಅಗ:ಕಾನಪ:ಎಫ್:47/05/242, ದಿನಾಂಕ: 22ನೇ ಜೂನ್ 2005**

**ಅರ್ಜಿದಾರರು:**

1. ಗೀತವ್ವ W/o ಸುಂಕಪ್ಪ ಜಮಖಂಡಿ ಉರ್ಫ್ ಕೊರವರ
2. ದ್ಯಾಮವ್ವ W/o ರಾಮಪ್ಪ ಜಮಖಂಡಿ ಉರ್ಫ್ ಕೊರವರ
3. ರಾಮಪ್ಪ S/o ದುರಗಪ್ಪ ಜಮಖಂಡಿ ಉರ್ಫ್ ಕೊರವರ R/o ಕೊರವರ ಓಣಿ, ನರಗುಂದ

**ವಿರುದ್ಧ**

**ಪ್ರತಿವಾದಿಗಳು:**

1. ಶ್ರೀ ಜಯದೇವಪ್ಪ S/o ಶಿದ್ರಾಮಪ್ಪ ಮಮದಾಪುರ ಕಾಲೇಜು ರಸ್ತೆ ಬದಾಮಿ ಜಿ: ಬಾಗಲಕೋಟೆ
2. ದಿ ಡಿವಿಜನಲ್ ಮ್ಯಾನೇಜರ್ ನ್ಯಾಶನಲ್ ಇನ್ಸೂರೆನ್ಸ್ ಕಂ.ಲಿ., ಮೆಳ್ಳಿಗೇರಿ ಕಾಂಪ್ಲೆಕ್ಸ್ ಕಲಾದಗಿರಸ್ತೆ ಬಾಗಲಕೋಟೆ-587101
3. ದಿ ಡಿವಿಜನಲ್ ಮ್ಯಾನೇಜರ್ ನ್ಯಾಶನಲ್ ಇನ್ಸೂರೆನ್ಸ್ ಕಂ.ಲಿ., ಸುಜಾತಾ ಕಾಂಪ್ಲೆಕ್ಸ್, ಪಿ.ಬಿ.ರಸ್ತೆ, ಹುಬ್ಬಳ್ಳಿ

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ: 1) ಗೀತವ್ವ W/o ಸುಂಕಪ್ಪ ಜಮಖಂಡಿ ಉರ್ಫ್ ಕೊರವರ 2) ದ್ಯಾಮಪ್ಪ W/o ರಾಮಪ್ಪ ಜಮಖಂಡಿ 3) ರಾಮಪ್ಪ S/o ದುರಗಪ್ಪ ಜಮಖಂಡಿ ಉರ್ಫ್ ಕೊರವರ R/o ಕೊರವರ ಓಣಿ, ನರಗುಂದ ಇವರು, ತಾವು ಮೃತ ಸುಂಕಪ್ಪ ರಾಮಪ್ಪ ಜಮಖಂಡಿ ಉರ್ಫ್ ಕೊರವರ ಇವರ ಹೆಂಡತಿ ಮತ್ತು ತಾಯಿ, ತಂದೆ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತ ಸುಂಕಪ್ಪ ಇವರು ಒಂದನೇ ಪ್ರತಿವಾದಿಗಳಾದ ಶ್ರೀ ಜಯದೇವ ಮಮದಾಪೂರ ಇವರಲ್ಲಿ ಹೆಲ್ಪರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ಆಶ್ರಿತರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಾರ್ಮಿಕ ಅಧಿಕಾರಿ,**
ಪಿ.ಆರ್.903 ಗದಗ ಜಿಲ್ಲೆ, ಗದಗ, ಹಾಗೂ
ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು.

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಅಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ

**ಸಂಖ್ಯೆ: ಕಾಅಗ:ಕಾನಪ:ಎಫ್:48/05 ದಿನಾಂಕ: 15ನೇ ಜೂನ್ 2005**

**ಅರ್ಜಿದಾರರು:**

1. ಶ್ರೀಮತಿ ವೆಂಕವ್ವಾ ಕೋಂ ಗಂಗಪ್ಪಾ ಕುರ್ತ ಕೋಟಿ @ ಕುಂಚಿಕೊರವರ
2. ಶ್ರೀ ಹನಮಂತಪ್ಪಾ ಗಂಗಪ್ಪಾ ಕುರ್ತಕೋಟಿ @ ಕುಂಚಿಕೊರವರ
3. ಶ್ರೀ ಗಂಗಪ್ಪ ಬಿನ್ ಪೂಜಾರಿ ಗಂಗಪ್ಪ ಕುರ್ತಕೋಟಿ @ ಕುಂಚಿಕೊರವರ R/o ವಡ್ಡರಗೇರಿ ಓಣಿ ಶಿದ್ರಾಮೇಶ್ವರ ನಗರ, ಗದಗ್

**ವಿರುದ್ಧ**

**ಪ್ರತಿವಾದಿಗಳು:**

1. ದಿ ಮ್ಯಾನೇಜರ್ ಡೈರೆಕ್ಟರ್ ರಾಜೇಶ್ ರೋಡ್ ಲೈನ್ಸ್ ಪ್ರೈವೇಟ್ ಲಿಮಿಟೆಡ್, ದೌಲತ್ ಕಾಂಪೌಂಡ್ ರಾನಲ್ ಬಸ್‌ಸ್ಟಾಪ್ ಭೀವಂಡಿ ಜಿಲ್ಲಾ: ಠಾಣೆ ಪಿನ್-400601. ರಾಜ್ಯ ಮಹಾರಾಷ್ಟ್ರ
2. ಯುನೈಟೆಡ್ ಇಂಡಿಯಾ ಇನ್ಸುರೆನ್ಸ್, ಕಂ.ಲಿ. ಸರ್. ವಿ.ಎಂ. ರಸ್ತೆ, ಯುನಿವರ್ಸಲ್ ಇನ್ಸ್ ಬಿಲ್ಡಿಂಗ್ 5ನೇ ಫ್ಲೋರ್, ಫೋರ್ಟ್ ಮುಂಬಯಿ-400001. ಮಹಾರಾಷ್ಟ್ರ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ: ಶ್ರೀಮತಿ: 1) ವೆಂಕವ್ವಾ W/o ಗಂಗಪ್ಪಾ ಕುರ್ತಕೋಟಿ ಕುಂಚಿಕೊರವರ 2) ಶ್ರೀ ಹನುಮಂತಪ್ಪ ಗಂಗಪ್ಪಾ ಕುರ್ತಕೋಟಿ 3) ಶ್ರೀ ಗಂಗಪ್ಪ ಬಿನ್ ಪೂಜಾರಿ ಗಂಗಪ್ಪ ಕುರ್ತಕೋಟಿ ಇವರು, ತಾವು ಮೃತ ಗಂಗಪ್ಪಾ ಕುರ್ತಕೋಟಿ ಕುಂಚಿಕೊರವರ ಇವರ ಹೆಂಡತಿ ಮತ್ತು ಮಗ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಗಂಗಪ್ಪ ಇವರು ಒಂದನೇ ಪ್ರತಿವಾದಿಗಳಾದ ದಿ. ಮ್ಯಾನೇಜರ್ ಡೈರೆಕ್ಟರ್ ರಾಜೇಶ್ ರೋಡ್ ಲೈನ್ಸ್ ಪ್ರೈ.ಲಿ. ಇವರಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ಆಶ್ರಿತರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30

ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ, ಗದಗ ಜಿಲ್ಲೆ, ಗದಗ, ಹಾಗೂ
ಪಿ.ಆರ್.904 ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಅಡಿ ಆಯುಕ್ತರು,**
**ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಕಾಅಗ:ಕಾನಪ:ಎಫ್:54/05/259 ದಿನಾಂಕ: 22ನೇ ಜೂನ್ 2005**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1. ಶ್ರೀಮತಿ ಯಂಕವ್ವಾ W/o ಅಜ್ಜಪ್ಪ ದೊಡ್ಡಮನಿ R/o ಜಿ.ಸಿ.ಡಿ. ಎಂ. ಕ್ವಾರ್ಟರ್ಸ್ ಹುಲಕೋಟಿ ಗದಗ

1. ಸೈಯದ್ ಅಹಮ್ಮದ್ ಅಣ್ಣಿಗೇರಿ R/o ಹುಬ್ಬಳ್ಳಿ ದಿ ಡಿವಿಜನಲ್ ಮ್ಯಾನೇಜರ್, ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ., ಗದಗ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ: ಯಂಕವ್ವಾ W/o ಅಜ್ಜಪ್ಪ ದೊಡ್ಡಮನಿ ಇವರು ತಾವು ಮೃತ ಹನಮಂತ ಅ. ದೊಡ್ಡಮನಿ ಇವರ ತಾಯಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತ ಹನಮಂತ ಅ. ದೊಡ್ಡಮನಿ ಇವರು ಒಂದನೇ ಪ್ರತಿವಾದಿಗಳಾದ ಸೈಯದ್ ಅಹಮ್ಮದ್ ಅಣ್ಣಿಗೇರಿ ಇವರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ಆಶ್ರಿತರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ, ಗದಗ ಜಿಲ್ಲೆ, ಗದಗ, ಹಾಗೂ
ಪಿ.ಆರ್.905 ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಅಡಿ ಆಯುಕ್ತರು,**
**ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಕಾಅಗ:ಕಾನಪ:ಎಫ್:55/05/262 ದಿನಾಂಕ: 22ನೇ ಜೂನ್ 2005**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1. ಶ್ರೀಮತಿ ನೂರ್‌ಜಾನ್ ಬೇಗಮ್ W/o ಗುಲ್ಲುಸಾಬ ನಾಲಬಂದ
2. ಕು: ಬಿಯಾಂಬಿ D/o ಗುಲ್ಲುಸಾಬ ನಾಲಬಂದ
3. ಕು: ಅಬ್ದುಲ್ ಖಾದರ ಬಿನ್ ಗುಲ್ಲುಸಾಬ ನಾಲಬಂದ R/o ನರಗುಂದ ಜಿ: ಗದಗ

1. ಶ್ರೀ ನೇಮಚಂದ್ರ ಯಮನಪ್ಪಾ ಮುತ್ತಿನ R/o ನರಗುಂದ ಜಿ: ಗದಗ
2. ದಿ ಡಿವಿಜನಲ್ ಮ್ಯಾನೇಜರ್ ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ಸುಜಾತಾ ಕಾಂಪ್ಲೆಕ್ಸ್ ಪಿಬಿ ರಸ್ತೆ ಹುಬ್ಬಳ್ಳಿ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ: 1) ನೂರಜಾನ್ ಬೇಗಮ್ W/o ಗುಲ್ಲುಸಾಬ ನಾಲಬಂದ 2) ಕು: ಬಿಯಾಂಬಿ 3) ಕು: ಅಬ್ದುಲ್ ಖಾದರ ಇವರು, ತಾವು ಮೃತ ಗುಲ್ಲುಸಾಬ ನಾಲಬಂದ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಗುಲ್ಲುಸಾಬ ನಾಲಬಂದ ಇವರು ಒಂದನೇ ಪ್ರತಿವಾದಿಗಳಾದ ನೇಮಚಂದ್ರ ಯ. ಮುತ್ತಿನ ಇವರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ಆಶ್ರಿತರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ, ಗದಗ ಜಿಲ್ಲೆ ಗದಗ, ಹಾಗೂ
ಪಿ.ಆರ್.906 ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು.

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಾರ್ಯಾಲಯ, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ**
**ಅಮಲ್ಜಾರಿ ಅರ್ಜಿ ಸಂಖ್ಯೆ: 466/ 2004-05**
**ನಮೂನೆ-10**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ, 1959ರ ಅಡಿಯಲ್ಲಿ ರೂಪಿಸಲಾಗಿರುವ ನಿಯಮಗಳನ್ವಯ 38ನೇ ರೂಲಿನ 7ನೇಯ ಕಾಲಂ ಪ್ರಕಾರ ನೀಡಿರುವ 'ಸೇಲ್ ಸರ್ಟಿಫಿಕೇಟ್'

ಪ್ರಧಾನ ವ್ಯವಸ್ಥಾಪಕರು, ದಿ ಹಿರಿಯೂರು ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ., ಹಿರಿಯೂರು-ಡಿಕ್ರಿದಾರರು

ವಿರುದ್ಧ

1. ಸತ್ತಾರ್‌ಸಾಬ್ ಬಿನ್ ಅಬ್ದುಲ್ ಮಜೀದ್ ಸಾಬ್, ಬಿ. ಕೆ. ಮೋದಿ ಜೆರಾಕ್ಸ್ ಮುಖ್ಯ ರಸ್ತೆ, ಹಿರಿಯೂರು - ಸಾಲಗಾರರು
2. ಮೊಹಮ್ಮದ್ ಅಬ್ರಾರ್ ಉಲ್ಲ ಬಿನ್ ಅಬ್ದುಲ್ ಖಾದರ್‌ಸಾಬ್, ಮಸೀದಿ ಮೊಹಲ್ಲ, ಹಿರಿಯೂರು - ಸಹಸಾಲಗಾರರು
3. ಎಂ. ವಿ. ಶಿವಮ್ಮ ತಂದೆ ವೀರಯ್ಯ ಬಿ. ಹಿರಿಯೂರು - ಸಹಸಾಲಗಾರರು

ಈ ಮೂಲಕ ದೃಢೀಕರಿಸುವುದೇನೆಂದರೆ ಶ್ರೀಮತಿ ಅಕ್ತರ್ ಉನ್ನೀಸಾ ಕೋಂ ಮೊಹಮ್ಮದ್ ಆಸೀಫ್ ಉಲ್ಲ, (ಜಾತಿ) ಮುಸ್ಲಿಂ (ಧರ್ಮ) ಇಸ್ಲಾಂ, (ವೃತ್ತಿ) ಗೃಹಿಣಿ (ವಾಸಸ್ಥಳ) ಜಾಮಿಯ ಮಸೀದಿ ಮೊಹಲ್ಲ, ಹಿರಿಯೂರು ಟೌನ್, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇವರು, ಮಾರಾಟಾಧಿಕಾರಿ (ನಿ.441), ದಿ ಹಿರಿಯೂರು ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ., ಹಿರಿಯೂರು ಇವರು ನಡೆಸಿದ ಬಹಿರಂಗ ಹರಾಜಿನಲ್ಲಿ ಈ ಕೆಳಗೆ ತೋರಿಸಿದ ಸ್ಥಿರ ಸ್ವತ್ತುಗಳನ್ನು ಕೊಂಡಿದ್ದಾರೆ. ಸದರಿ ಸ್ಥಿರ ಸ್ವತ್ತುಗಳನ್ನು, ದಿ ಹಿರಿಯೂರು ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ., ಹಿರಿಯೂರು ಇವರಿಗೆ ಶ್ರೀ ಸತ್ತಾರ್ ಸಾಬ್ ಬಿನ್ ಅಬ್ದುಲ್ ಮಜೀದ್‌ಸಾಬ್ (ಜಾತಿ) ಮುಸ್ಲಿಂ (ಧರ್ಮ) ಇಸ್ಲಾಂ, (ವೃತ್ತಿ) ವಾಸಸ್ಥಳ ಬಿ. ಕೆ. ಮೋದಿ ಜೆರಾಕ್ಸ್, ಮುಖ್ಯರಸ್ತೆ, ಹಿರಿಯೂರು ಟೌನ್, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇವರಿಂದ ಬರಬೇಕಾದ ಬಾಕಿ ಮೊತ್ತಕ್ಕೆ ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಇವರ ನ್ಯಾಯಾಲಯದಿಂದ ಡಿಕ್ರಿ/ ಅವಾರ್ಡ್ ಸಂಖ್ಯೆ: 224/2003-04 ದಿನಾಂಕ: 5.4.2004ರ ರೀತ್ಯಾ ಅಮಲ್ಜಾರಿ ಕ್ರಮದಲ್ಲಿ ಹರಾಜು ಮಾಡಲಾಗಿ, ಕೊಂಡ ಮೊತ್ತ ರೂ.1,17,000/- (ರೂ. ಒಂದು ಲಕ್ಷದ ಹದಿನೇಳು ಸಾವಿರ ಮಾತ್ರ)ಗಳು ಸಂಪೂರ್ಣವಾಗಿ ಪಾವತಿಯಾಗಿದ್ದು, ನಾನು ದಿನಾಂಕ: 2.6.2005 ರಂದು ಸದರಿ ಹರಾಜನ್ನು (ಮಾರಾಟವನ್ನು) ಖಾಯಂಗೊಳಿಸಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಚಿತ್ರದುರ್ಗ ಉಪ-ವಿಭಾಗ, ಚಿತ್ರದುರ್ಗ.

**ಸ್ಥಿರ ಸ್ವತ್ತುಗಳ ಷೆಡ್ಯೂಲ್**

| | | |
|---|---|---|
| ನೋಂದಣಿ ಜಿಲ್ಲೆ | : | ಚಿತ್ರದುರ್ಗ |
| ನೋಂದಣಿ ಉಪಜಿಲ್ಲೆ | : | ಹಿರಿಯೂರು |
| ತಾಲ್ಲೂಕು | : | ಹಿರಿಯೂರು |
| ಗ್ರಾಮ | : | ಹಿರಿಯೂರು ಟೌನ್ |

**ಸ್ವತ್ತುಗಳ ವಿವರ**

ಶ್ರೀ ಮೊಹಮ್ಮದ್ ಅಬ್ರಾರ್ ಉಲ್ಲ ಬಿನ್ ಅಬ್ದುಲ್ ಖಾದರ್ ಸಾಬ್, ಮಸೀದಿ ಮೊಹಲ್ಲ, ಹಿರಿಯೂರು ಇವರ ಹೆಸರಿನಲ್ಲಿರುವ ನಿವೇಶನ, ಇದಕ್ಕೆ ಚಕ್ಕುಬಂದಿ.

| | | |
|---|---|---|
| ಪೂರ್ವಕ್ಕೆ | : | ಓಣಿ ನಂತರ ರಜಿಯ ಬೇಗಂರವರ ಮನೆ |
| ಪಶ್ಚಿಮಕ್ಕೆ | : | ಜಾಮಿಯ ಮಸೀದಿ ರಸ್ತೆ |
| ಉತ್ತರಕ್ಕೆ | : | ಮೊಹಮ್ಮದ್ ಆಸೀಫುಲ್ಲರವರ ಮನೆ |
| ದಕ್ಷಿಣಕ್ಕೆ | : | ಜಿ ಭಕ್ಷಿರವರ ಮನೆ |

ಸರ್ವೆನಂ. ಮುನಿಸಿಪಲ್ ಖಾತೆ ನಂ. 2377, ಅಸೆಸ್‌ಮೆಂಟ್ ನಂ. 2183/2356

ಹೆಸರು : 9ನೇ ವಾರ್ಡ್, ಹಿರಿಯೂರು.

ಅಂದಾಜು ವಿಸ್ತೀರ್ಣ: 35X12 ಅಡಿಗಳು

ಅಸೆಸ್‌ಮೆಂಟ್ ರೂ.........

ಮಾರಾಟದ ಬೆಲೆ (ಪ್ರತಿಲಾಟ್‌ಗೆ): ಒಟ್ಟು ರೂ.1,17,000/- (ಒಂದು ಲಕ್ಷದ ಹದಿನೇಳು ಸಾವಿರ ರೂಪಾಯಿಗಳು)

ಹರಾಜು ದಿನಾಂಕ: 17.02.2005.

ನನ್ನ ಸಹಿ ಮತ್ತು ಮುದ್ರೆಯೊಂದಿಗೆ ದಿನಾಂಕ: 2.06.2005 ರಲ್ಲಿ ನೀಡಲ್ಪಟ್ಟಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಚಿತ್ರದುರ್ಗ ಉಪ-ವಿಭಾಗ, ಚಿತ್ರದುರ್ಗ.

**ಫಾರಂ ನಂಬರು 11**

**(38ನೇಯ ರೂಲಿನ (7)ನೆಯ ಕಾಲಂ)**

**ಸ್ಥಿರ ಸ್ವತ್ತುಗಳನ್ನು ಕೊಂಡದಕ್ಕೆ ಪ್ರಕಟಣೆ**

ಚಿತ್ರದುರ್ಗ ಜಿಲ್ಲಾ, ಹಿರಿಯೂರು ತಾಲ್ಲೂಕು, ಹಿರಿಯೂರು ಟೌನ್ ಜಾಮಿಯ ಮಸೀದಿ ಮೊಹಲ್ಲ ದಲ್ಲಿರುವ ಶ್ರೀಮತಿ ಅಕ್ತರುನ್ನಿಸಾ ಕೋಂ ಮೊಹಮ್ಮದ್ ಆಸಿಫ್ ಉಲ್ಲ ಇವರು ಈ ಕೆಳಗೆ ತೋರಿಸಿದ ಸ್ಥಿರ ಸ್ವತ್ತುಗಳನ್ನು ಬಹಿರಂಗವಾಗಿ ಹರಾಜಿನಲ್ಲಿ 2005ನೇ ಇಸವಿ ಫೆಬ್ರವರಿ ತಿಂಗಳ 17ನೇ ತಾರೀಖಿನಲ್ಲಿ ಕ್ರಯಕ್ಕೆ ಪಡೆದುಕೊಂಡಿದ್ದಾಗಿಯೂ ಮತ್ತು ದರಖಾಸ್ತು ಹಣ ರೂ.1,17,000/- (ಒಂದು ಲಕ್ಷದ ಹದಿನೇಳು ಸಾವಿರ ಮಾತ್ರ) ಗಳನ್ನು ಸಂಪೂರ್ಣವಾಗಿ ಪಾವತಿ ಮಾಡಿದ್ದಾರಾಗಿಯೂ ಈ ಮೂಲಕ ಎಲ್ಲಾ ಜನರಿಗೆ ಬಹಿರಂಗವಾಗಿ ತಿಳಿಸೋಣವಾಗುತ್ತದೆ. ಆದ ಪ್ರಯುಕ್ತ ಸದರಿ ಸ್ಥಿರಸ್ವತ್ತುಗಳಲ್ಲಿರುವ ಬಾಕಿದಾರನ ಎಲ್ಲಾ ಹಕ್ಕು-ವ-ಪ್ರಯೋಜನಗಳಿಗೆ ಸದರಿ ಶ್ರೀ ಅಕ್ತರುನ್ನಿಸಾ ಕೋಂ ಮೊಹಮ್ಮದ್ ಆಸಿಫ್ ಉಲ್ಲರವರು ಉತ್ತರಾಧಿಕಾರರಾಗಿದ್ದಾರೆ ಎಂಬುದಾಗಿ ಈ ಮೂಲಕ ದೃಢಪಡಿಸೋಣವಾಗುತ್ತಿದೆ.

| ಗ್ರಾಮ ಮತ್ತು ತಾಲ್ಲೂಕು | ಸ್ಥಿರಸ್ವತ್ತುಗಳ ವಿವರ ತರಹೆ | ವಿವರ | | ಅಂದಾಜು ವಿಸ್ತೀರ್ಣ | ಷರಾ |
|---|---|---|---|---|---|
| | | ಪೋಡು ನಂ. | ಖಾತೆದಾರನ ಹೆಸರು | | |
| 1 | 2 | 3 | 4 | 5 | 6 |
| ಹಿರಿಯೂರು ಟೌನ್ ಹಿರಿಯೂರು ತಾಲ್ಲೂಕು | ತಾರಸಿ/ ಮಾಳಿಗೆ ಮನೆ | ಮುನಿಸಿಪಲ್ ವಾರ್ಡ್ ನಂ.9 ಖಾತೆ ನಂ.2377 ಅಸೆಸ್‌ಮೆಂಟ್ ನಂ.2183/2356 | ಮೊಹಮ್ಮದ್ ಅಬ್ರಾರುಲ್ಲ ಬಿನ್ ಕಡಕಲೂರು ಅಬ್ದುಲ್ ಖಾದರ್‌ಸಾಬ್ | 35x12 ಅಡಿಗಳು | |

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಪಿ.ಆರ್.907 ಚಿತ್ರದುರ್ಗ ಉಪ-ವಿಭಾಗ, ಚಿತ್ರದುರ್ಗ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3. ಅಮೊ:ವಾಹನ:17:2004-05 ದಿನಾಂಕ: 13ನೇ ಜೂನ್ 2005**

**ಉಪಸ್ಥಿತರು :** ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ
**ಫಿರ್ಯಾದುದಾರರು :** ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ.
**ವಿರುದ್ಧ :**
**ಆರೋಪಿಗಳು :** 1) ನಿಸಾರ್ ಅಹಮ್ಮದ್ 2) ನೌಶಾದ್ 3) ಮೆಹಬೂಬ್ ಬಾಷಾ
**ಬಾಧ್ಯತೆದಾರರು :** ಯಾರು ಬಂದಿರುವುದಿಲ್ಲ.

**ಪ್ರಸ್ತಾವನೆ:**

ದಿನಾಂಕ: 03.03.2005 ರಂದು ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಶಿಕಾರಿಪುರ ತಾಲ್ಲೂಕು ಶಿಕಾರಿಪುರ ಮಾಸೂರು ರಸ್ತೆಯ ಕವಸಾಪುರ ಗ್ರಾಮದ ಶಿವಮೊಗ್ಗ ಜಿಲ್ಲಾ ಗಡಿ ಬೋರ್ಡ್ ಇರುವ ಸ್ಥಳದಲ್ಲಿ ಪಂಚರ ಸಮಕ್ಷಮ ಕಾಯುತ್ತಿರುವಾಗ ಸಾಯಂಕಾಲ 5.30ರ ಸಮಯದಲ್ಲಿ ಶಿಕಾರಿಪುರ ಮಾರ್ಗವಾಗಿ ಒಂದು ಬಿಳಿ ಅಂಬಾಸಿಡರ್ ಕಾರ್ ನಂ. ಜಿಎ01ಇ0301 ಬರುತ್ತಿರುವುದನ್ನು ತಡೆದು ನಿಲ್ಲಿಸಿ ಕಾರಿನ ಚಾಲಕನು ತಿಳಿಸಿದಂತೆ ವಾಹನದಲ್ಲಿ ಬೀಟೆ ಸೈಜ್ 163=0.239 ಘಮಿ. ಇದೆಂದು ಇವುಗಳು ತಯಾರಿಸಿದ ಬಿಡಿಭಾಗಗಳೆಂದು ಈ ಸೈಜುಗಳನ್ನು ರಾಣಿಬೆನ್ನೂರಿಗೆ ಮಾರಾಟಕ್ಕಾಗಿ ಸಾಗಿಸುತ್ತಿರುವುದೆಂದು ಮತ್ತು ಈ ಸೈಜುಗಳನ್ನು ಸಾಗಿಸಲು ರಹದಾರಿ ಇಲ್ಲವೆಂದು ತಿಳಿಸಿದ ಮೇರೆಗೆ ಹಾಗೂ ಈ ಸೈಜುಗಳ ಮೇಲೆ ಯಾವುದೇ ಇಲಾಖಾ ಛಾಪವಾಗಲಿ ಸಾಗಿಸಲು ರಹದಾರಿಯಾಗಲೀ ಇಲ್ಲದ ಕಾರಣ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಮತ್ತು ಮೂರು ಜನ ಆಸಾಮಿಗಳನ್ನು ಇಲಾಖಾ ಪರ ವಶಪಡಿಸಿಕೊಂಡು ಮಹಜರ್ ಕ್ರಮ ಜರುಗಿಸಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 62,24, 71(ಎ) ರಿಂದ (ಜಿ), 50ಕ್ಕೆ, 104ಎ, ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 163, 165ರ ಪ್ರಕಾರ ಶಿಕಾರಿಪುರ ವಲಯದ ಅ.ಮೊ. ಸಂಖ್ಯೆ 104/04-05 ದಾಖಲಿಸಿ, ನಂತರ ಮೂರು ಜನ ಆಸಾಮಿಗಳನ್ನು ಜೆ.ಎಂ.ಎಫ್.ಸಿ. ಶಿಕಾರಿಪುರಕ್ಕೆ ಒಪ್ಪಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ದಿಗೆ ಕೊಟ್ಟಿದೆ.

ನಂತರ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿನಾಂಕ: 31.03.2005 ರಂದು 30 (ಮೂವತ್ತು) ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಸರ್ಕಾರಿ ಮುದ್ರಣಾಲಯ ಬೆಂಗಳೂರು ಮತ್ತು ನಿರ್ದೇಶಕರು ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಲು ಕೋರಲಾಯಿತು. ಈ ಪ್ರಕಟಣೆಯೂ ದಿನಾಂಕ: 13.04.2005 ರಂದು ಸಾಗರ ಸಂದೇಶ ದಿನಾಂಕ: 12.04.2005 ರಂದು ವನರಾಜ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ಬಗ್ಗೆ ಕ್ಲೈಮ್ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವುದು ಸ್ಪಷ್ಟವಾಗಿರುತ್ತದೆ. ಈ ಪ್ರಕರಣದಲ್ಲಿ ಸಾಕಷ್ಟು ಕಾಲಾವಕಾಶವನ್ನು ನೀಡಿದರೂ ಸಹ ವಾಹನದ ಮಾಲೀಕರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ವಾಹನ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತುಪಡಿಸಲು ವಿಫಲರಾಗಿರುವ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ವಲಯ ಅರಣ್ಯಾಧಿಕಾರಿ ಶಿಕಾರಿಪುರ ಇವರು ಜಪ್ತು ಮಾಡಿದ ವಾಹನ ಅಂಬಾಸಿಡರ್‌ಕಾರ್ ನಂ. ಜಿಎ-01-ಇ-0301 ಛಾಸ್ಸಿ ನಂ. 111-459487 ಇಂಜಿನ್ ನಂ. 0ಇ4-07609 ಮತ್ತು ಈ ವಾಹನದಲ್ಲಿದ್ದ ಬೀಟೆ ಸೈಜ್ 163=0.239 ಘಮೀ.ಯು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ: 30.05.2005 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಪಿ.ಆರ್.908 ಸಾಗರ ವಿಭಾಗ, ಸಾಗರ.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ
## ಬಿ3. ಅಮೋ:ವಾಹನ:18:2004-05

**ಉಪಸ್ಥಿತರು :** ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

**ಫಿರ್ಯಾದುದಾರರು :** ವಲಯ ಅರಣ್ಯಾಧಿಕಾರಿ ಆನಂದಪುರಂ ವಲಯ, ಚೋರಡಿ.

**ವಿರುದ್ಧ :**

**ಆರೋಪಿಗಳು :** ಪತ್ತೆಯಾಗಿರುವುದಿಲ್ಲ.

**ಬಾಧ್ಯತೆದಾರರು :** ಯಾರು ಬಂದಿರುವುದಿಲ್ಲ.

**ಪ್ರಸ್ತಾವನೆ:**

ದಿನಾಂಕ: 23.03.2005 ರಂದು ವಲಯ ಅರಣ್ಯಾಧಿಕಾರಿ, ಚೋರಡಿ ಮತ್ತು ಸಿಬ್ಬಂದಿಯವರು ಶಿವಮೊಗ್ಗ ತಾಲ್ಲೂಕು ಕುಂಸಿ ಹೋಬಳಿ ತುಪ್ಪೂರು ಗ್ರಾಮದ ಅರಣ್ಯ ವಸತಿ ಗೃಹದ ಬಳಿ ರಾಷ್ಟ್ರೀಯ ಹೆದ್ದಾರಿ 206ರಲ್ಲಿ ಕೋಣೆಹೊಸೂರು ಕ್ರಾಸ್ ಬಳಿ ವಾಹನ ತಪಾಸಣೆ ಮಾಡುತ್ತಿರುವಾಗ ಉದ್ದನೂರು ಕೋಣೆಹೊಸೂರು ಮಾರ್ಗವಾಗಿ ಒಂದು ಬಳಿ ಮಾರುತಿವ್ಯಾನ್ ನಂ. ಸಿಟಿವಿ 5657 ಬರುತ್ತಿರುವುದನ್ನು ತಡೆದು ನಿಲ್ಲಿಸಲು ಸೂಚಿಸಿದಾಗ ನಿಲ್ಲಿಸದೇ ವೇಗವಾಗಿ ಚಲಿಸಿದಾಗ ಇಲಾಖಾ ವಾಹನದಿಂದ ಬೆನ್ನಟ್ಟಿ ಮೇಲ್ಕಂಡ ಸ್ಥಳದಲ್ಲಿ ನಿಲ್ಲಿಸಿ ವಾಹನದಲ್ಲಿದ್ದ ಆಸಾಮಿಗಳು ವಾಹನದಿಂದ ಇಳಿದು ಓಡಲು ಪ್ರಾರಂಭಿಸಿದಾಗ ಬೆನ್ನಟ್ಟಿದರು ಸಿಗದೇ ಕತ್ತಲೆಯಲ್ಲಿ ಓಡಿ ಪರಾರಿಯಾದರು. ನಂತರ ವಾಹನ ಪರಿಶೀಲಿಸಲಾಗಿ ವಾಹನದಲ್ಲಿ ಶ್ರೀಗಂಧ 20 ಕೆ.ಜಿ. ಇದ್ದು, ಇವುಗಳ ಮೇಲೆ ಯಾವುದೇ ಇಲಾಖಾ ಛಾಪಾವಾಗಲೀ ಮತ್ತು ಸಾಗಿಸಲು ಯಾವುದೇ ಪರವಾನಿಗೆ ಇಲ್ಲವೆಂದು ಕಂಡು ಬಂದ ಮೇರೆಗೆ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ, ಶ್ರೀಗಂಧ ಇಲಾಖಾ ಪರ ವಶಪಡಿಸಿಕೊಂಡು ಮಹಜರ್ ಕ್ರಮ ಜರುಗಿಸಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 62,67, 71(ಎ) ರಿಂದ (ಜಿ), 80,84, ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಆನಂದಪುರಂ ವಲಯದ ಅ.ಮೊ. ಸಂಖ್ಯೆ: 133/04-05 ದಾಖಲಿಸಿ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ದಿಗೆ ಕೊಟ್ಟಿದೆ.

ನಂತರ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿನಾಂಕ: 31.03.2005 ರಂದು 30 (ಮೂವತ್ತು) ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಸರ್ಕಾರಿ ಮುದ್ರಣಾಲಯ ಬೆಂಗಳೂರು ಮತ್ತು ನಿರ್ದೇಶಕರು ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಲು ಕೋರಲಾಯಿತು. ಈ ಪ್ರಕಟಣೆಯು ದಿನಾಂಕ: 13.04.2005 ರಂದು ಸಾಗರ ಸಂದೇಶ, ದಿನಾಂಕ: 12.04.2005 ರಂದು ವನರಾಜ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ಬಗ್ಗೆ ಕ್ಲೈಮ್ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವುದು ಸ್ಪಷ್ಟವಾಗಿರುತ್ತದೆ. ಈ ಪ್ರಕರಣದಲ್ಲಿ ಸಾಕಷ್ಟು ಕಾಲಾವಕಾಶವನ್ನು ನೀಡಿದರೂ ಸಹ ವಾಹನದ ಮಾಲೀಕರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ವಾಹನ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರ್ಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತುಪಡಿಸಲು ವಿಫಲರಾಗಿರುವ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ವಲಯ ಅರಣ್ಯಾಧಿಕಾರಿ ಆನಂದಪುರಂ ಇವರು ಜಪ್ತು ಮಾಡಿದ ವಾಹನ ಮಾರುತಿವ್ಯಾನ್ ನಂ. ಸಿಟಿವಿ 5657 ಛಾಸ್ಸಿ ನಂ. ಎನ್:759491 ಇಂಜಿನ್ ನಂ. ಇಲ್ಲ ಮತ್ತು ಈ ವಾಹನದಲ್ಲಿದ್ದ ಶ್ರೀಗಂಧ 20 ಕೆ.ಜಿ.ಯು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ: 30.05.2005 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರೂ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.909

## ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ಭದ್ರಾವತಿ
## ಸಂಖ್ಯೆ: ಬಿ3:ಸಿಓಎನ್:ಸಿಆರ್:15/2001-02 ದಿನಾಂಕ: 18ನೇ ಜೂನ್ 2005

**ನಿರೂಪಣಾಧಿಕಾರಿಗಳು :** ಶ್ರೀಮತಿ ಸೀಮಾಗರ್ಗ್ ಭಾ.ಅ.ಸೇ, ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ

**ಫಿರ್ಯಾದುದಾರರು :** ವಲಯ ಅರಣ್ಯ ಅಧಿಕಾರಿ ಉಂಬ್ಳೆಬೈಲು ವಲಯ, ಉಂಬ್ಳೆಬೈಲು

**ವಿರುದ್ಧ**

**ಅರ್ಜಿದಾರರು :** ಹೆಚ್. ಸತ್ಯನಾರಾಯಣ ಬಿನ್ ಹುಚ್ಚಪ್ಪ ರೆಡ್ಡಿ ಕೇರಾಫ್ ಗಣೇಶನಾಯ್ಕ, ತೇಜಸ್ವಿ ನಿಲಯ ರಸ್ತೆ, ಬೊಮ್ಮನಕಟ್ಟೆ, ಭದ್ರಾವತಿ

**ಪ್ರಸ್ತಾವನೆ:**

ದಿನಾಂಕ: 26.08.2001 ರಂದು ಭದ್ರಾವತಿ ಅರಣ್ಯ ವಿಭಾಗದ ಉಂಬ್ಳೆಬೈಲು ವಲಯದ ವಲಯ ಅರಣ್ಯ ಅಧಿಕಾರಿಗಳು ಮತ್ತು ಸಿಬ್ಬಂದಿಯವರು ಉಂಬ್ಳೆಬೈಲು ಜಂಕ್ಷನ್ ರಸ್ತೆಯ ಆನೇಕಲ್ ದೇವಸ್ಥಾನದ ಬಳಿ ಮುಖ್ಯ ರಸ್ತೆಯಲ್ಲಿ ಕಾಯುತ್ತಿರುವಾಗ್ಗೆ ಒಂದು ನೀಲಿ ಬಣ್ಣದ ಕೆಎ-18-

ಎಂ-122 ನಂಬರಿನ ಅಂಬಾಸಿಡರ್ ಕಾರಿನಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದ 3 ಬೀಟೆ ಸೈಜು ಹಾಗೂ 1 ಚೀಲ ಶ್ರೀಗಂಧದ ಸಣ್ಣ ಸಣ್ಣ ಬೇರು ಚಕ್ಕೆಗಳು (ತೂಕ 27 ಕೆಜಿ) ವಾಹನದ ಸಹಿತ ಪತ್ತೆ ಹಚ್ಚಿ ವಶಪಡಿಸಿಕೊಂಡು ಸ್ಥಳದಲ್ಲಿ ಪಂಚನಾಮೆ ಜರುಗಿಸಿ ಅರಣ್ಯ ಮೊಕದ್ದಮೆ ದಾಖಲು ಮಾಡಿರುತ್ತಾರೆ ಹಾಗೂ ಸದರಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ದಾಖಲಾತಿಗಳ ಸಹಿತ ಈ ನ್ಯಾಯಾಲಯಕ್ಕೆ ಹಾಜರುಪಡಿಸಿ ಅರಣ್ಯ ಕಾಯ್ದೆ 71 (ಎ) ಪ್ರಕಾರ ಕ್ರಮ ಜರುಗಿಸಲು ಕೋರಿಕೊಂಡಿರುತ್ತಾರೆ. ಮೇಲ್ಕಂಡ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೂ ಸುರಕ್ಷತೆಗಾಗಿ ವಲಯ ಅರಣ್ಯ ಅಧಿಕಾರಿ, ಉಂಬ್ಳೆಬೈಲುರವರ ವಶಕ್ಕೆ ನೀಡಲಾಗಿದೆ.

ದಿನಾಂಕ: 29.9.2001 ರಂದು ವಾಹನದ ಮಾಲೀಕರು ಅರ್ಜಿದಾರರ ವಕೀಲರ ಮುಖಾಂತರ ಈ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿ ಮೇಲ್ಕಂಡ ವಾಹನದ ಆರ್.ಸಿ. ಮಾಲೀಕನಾಗಿರುತ್ತೇನೆಂದು ವಾಹನವನ್ನು ಜೀವನೋಪಾಯಕ್ಕಾಗಿ ಇಟ್ಟು ಕೊಂಡಿರುತ್ತೇನೆಂದು ವಾಹನವನ್ನು ವಲಯ ಅರಣ್ಯ ಅಧಿಕಾರಿಗಳು ಉಂಬ್ಳೆಬೈಲು ರವರು ಸೀಜ್ ಮಾಡಿರುತ್ತಾರೆ. ಈ ಕೃತ್ಯಕ್ಕೂ ತನಗೂ ಯಾವುದೇ ಸಂಬಂಧ ಇರುವುದಿಲ್ಲವೆಂದು ವಾಹನವು ಕಛೇರಿ ಬಯಲಿನಲ್ಲಿಟ್ಟಿರುವುದರಿಂದ ವಾಹನದ ಮೌಲ್ಯ ಹಾಳಾಗಿ ವಾಹನ, ಉಪಯೋಗಕ್ಕೆ ಬಾರದಂತೆ ಅಗುತ್ತದೆಂದು ನ್ಯಾಯಾಲಯ ವಿಧಿಸುವ ಷರತ್ತಿಗೆ ಬದ್ದನಾಗಿರುತ್ತೇನೆಂದು ಹೇಳಿ ವಾಹನವನ್ನು ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ದಿನಾಂಕ: 15.12.2001 ರಂದು ವಾಹನದ ಮಾಲೀಕರಿಗೆ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಎ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ. ವಾಹನದ ಮಾಲೀಕರು ವಕೀಲರ ಮುಖಾಂತರ ಸಮಜಾಯಿಸಿ ನೀಡಿರುತ್ತಾರೆ. ದಿನಾಂಕ: 25.8.2001 ರಂದು ಆಯುರ್ವೇದಿಕ್ ಔಷಧಿ ತರಲು ಅಂಕೋಲಕ್ಕೆ ಹೋಗಿದ್ದು ಔಷಧಿ ತೆಗೆದುಕೊಂಡು ದಿನಾಂಕ: 27.8.2001ಕ್ಕೆ ವಾಪಾಸ್ಸು ಬಂದಿರುತ್ತೇನೆ. ಆ ಸಮಯದಲ್ಲಿ ವಾಹನವನ್ನು ಅಲ್ತಾಫ್ ಅಹಮದ್ ಎಂಬ ಚಾಲಕನಿಗೆ ಕೊಟ್ಟಿರುತ್ತೇನೆ. ಚಾಲಕನ ಮನೆಗೆ ಹೋಗಿ ವಾಹನ ವಿಚಾರಿಸಿದಾಗ ವಾಹನ ಎಲ್ಲಿಗೆ ಹೋಗಿತ್ತು ಎಂದು ತಿಳಿದುಬಂದಿರುವುದಿಲ್ಲ ವಾಹನವು ಬಾಡಿಗೆ ಹೋಗಿರಬಹುದು ಎಂದು ತಿಳಿದುಕೊಂಡು ಸುಮ್ಮನಿದ್ದೆ. 5-6 ದಿನಗಳ ನಂತರ ಕನ್ನಡ ದಿನಪತ್ರಿಕೆಯಲ್ಲಿ ವಾಹನವು ಅರಣ್ಯ ಉತ್ಪನ್ನ ಸಾಗಾಣಿಕೆಯಲ್ಲಿ ಸಿಕ್ಕಿ ಉಂಬ್ಳೆಬೈಲು ವಲಯ ಅರಣ್ಯ ಅಧಿಕಾರಿಗಳ ವಶದಲ್ಲಿದೆ ಎಂದು ತಿಳಿದುಬಂದು ಈ ನ್ಯಾಯಾಲಯಕ್ಕೆ ವಾಹನ ಬಿಡುಗಡೆ ಬಗ್ಗೆ ಅರ್ಜಿ ಸಲ್ಲಿಸಿರುತ್ತೇನೆ. ಈ ಕೃತ್ಯದಲ್ಲಿ ನನ್ನ ಪಾತ್ರ ಇರುವುದಿಲ್ಲ ಎಂದು ಹೇಳಿ ವಾಹನ ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ದಿನಾಂಕ: 4.2.2002 ರಂದು ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. ನ್ಯಾಯಾಲಯ, ಭದ್ರಾವತಿ ಇವರು ಆಕ್ಷೇಪಣೆ ಸಲ್ಲಿಸಿ ಮೇಲ್ಕಂಡ ಪ್ರಕರಣಕ್ಕೆ ಸಂಬಂಧಿಸಿದ ವಾಹನದಲ್ಲಿ ಸರ್ಕಾರದ ಸ್ವತ್ತಾದ ಶ್ರೀಗಂಧವನ್ನು ಸಾಗಾಣಿಕೆ ಮಾಡಿದ್ದು ಈ ಪ್ರಕರಣದಲ್ಲಿ ಅರ್ಜಿದಾರರ ಪಾತ್ರ ಇಲ್ಲದಿರುವ ಬಗ್ಗೆ ತನಿಖೆ ಅಗತ್ಯವಿರುವುದರಿಂದ ಅರ್ಜಿದಾರರ ಮಧ್ಯಂತರ ಅರ್ಜಿಯನ್ನು ತಿರಸ್ಕರಿಸಬೇಕಾಗಿ ವಿನಂತಿಸಿರುತ್ತಾರೆ.

ಅರ್ಜಿದಾರರ ಅರ್ಜಿ ಪ್ರಕರಣಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಪರಿಶೀಲಿಸಿ ಈ ಪ್ರಕರಣದ ಬಗ್ಗೆ ಸಂಪೂರ್ಣ ವಿಚಾರಣೆ ಅಗತ್ಯ ಎಂದು ಭಾವಿಸಿ ಅರ್ಜಿದಾರರ ಮಧ್ಯಂತರ ವಾಹನ ಬಿಡುಗಡೆ ಕೋರಿಕೆಯ ಅರ್ಜಿಯನ್ನು ದಿನಾಂಕ: 20.03.2002 ರ ಆದೇಶದಲ್ಲಿ ತಿರಸ್ಕರಿಸಲಾಗಿರುತ್ತದೆ.

ವಾಹನದ ಮಾಲೀಕರು ಈ ಪ್ರಾಧಿಕಾರದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದೇ ಇದ್ದ ಕಾರಣದಿಂದಾಗಿ ಪ್ರಕರಣವನ್ನು ಅಂತಿಮವಾಗಿ ತೀರ್ಮಾನಗೊಳಿಸುವ ಸಲುವಾಗಿ ಪ್ರಕರಣದ ವಿಚಾರಣೆಯನ್ನು ದಿನಾಂಕ: 30.10.2002 ರಿಂದ 9.2.2005 ರವರೆಗೆ ಹಲವಾರು ದಿನಾಂಕಗಳಂದು ಅಭಿಯೋಜನಾ ಸಾಕ್ಷಿಗಳನ್ನು ಹಾಗೂ ವಾಹನ ಮಾಲೀಕರ ವಿಚಾರಣೆಯನ್ನು ನಡೆಸಲಾಯಿತು ಪ್ರಾಸಿಕ್ಯೂಷನ್ ಪರವಾಗಿ ಶ್ರೀ ಜಿ. ವೇಣುಗೋಪಾಲ, ವಲಯ ಅರಣ್ಯ ಅಧಿಕಾರಿಯನ್ನು ದಿನಾಂಕ: 30.10.2002 ರಂದು ಪ್ರಾಸಾ-1 ಎಂದು ಸಣ್ಣೇರಪ್ಪ ವನಪಾಲಕರನ್ನು ಪ್ರಾಸಾ-2 ಎಂದು ವಿಚಾರಣೆ ಮಾಡಿ ಹೇಳಿಕೆ ಪಡೆಯಲಾಯಿತು ಪ್ರತಿವಾದಿಯ ಪರವಾಗಿ ದಿನಾಂಕ: 25.06.2003 ರಂದು ವಾಹನ ಮಾಲೀಕರಾದ ಶ್ರೀ ಸತ್ಯನಾರಾಯಣ ಹೆಚ್ ಇವರನ್ನು ಅರ್ಜಿದಾರರ ಸಾಕ್ಷಿ-1 ಎಂದು ವಿಚಾರಣೆ ಮಾಡಿ ಹೇಳಿಕೆ ದಾಖಲಿಸಿಕೊಳ್ಳಲಾಯಿತು.

ಪ್ರಾಧಿಕಾರಕ್ಕೆ ಹಾಜರುಪಡಿಸಿದ ದಾಖಲಾತಿಗಳನ್ನು ಪರಿಶೀಲಿಸಲಾಯಿತು ಹಾಗೂ ಅರ್ಜಿದಾರರುಗಳ ಪರವಾಗಿ ನ್ಯಾಯವಾದಿಗಳು ಮಂಡಿಸಿದ ವಾದ ಹಾಗೂ ಫಿರ್ಯಾದಿ ಪರ ಸಹಾಯಕ ಸರ್ಕಾರಿ ಅಭಿಯೋಜಕರು ಮಂಡಿಸಿದ ವಾದ ವಿವಾದವನ್ನು ಆಲಿಸಲಾಯ್ತು.

ಈ ಪ್ರಕರಣದಲ್ಲಿ ವಾಸ್ತವಾಂಶ ಮತ್ತು ಕಾನೂನಿನ ವಸ್ತು ಸ್ಥಿತಿ ಹಾಗೂ ಲಭ್ಯವಿದ್ದ ವಿಷಯ ಸಾಮಗ್ರಿಗಳ ತಳಹದಿಯ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿವೆ.

1. ಅರ್ಜಿದಾರರ ಅಂಬಾಸಿಡರ್ ಕಾರು ಕೆಎ-18-ಎಂ-1224 ರಲ್ಲಿ ಸಾಗುವಾನಿ, ಬೀಟೆ ಹಾಗೂ ಶ್ರೀಗಂಧದ ತುಂಡುಗಳನ್ನು ದಿನಾಂಕ: 26.8.2001 ರಂದು ಕಾನೂನಿಗೆ ವಿರುದ್ಧವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?
2. ಕರ್ನಾಟಕ ಅರಣ್ಯ ವಿಧಿ 71(ಬಿ)ರ ಪ್ರಕಾರ ವಾಹನದ ಮಾಲೀಕರವರಿಗೆ ಕಾರಣ ಕೇಳಿ ನೋಟೀಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?
3. ವಾಹನ ಮಾಲೀಕರು ಅಥವಾ ಅವರ ಕೆಲಸಗಾರರು ಅಥವಾ ಅವರ ಪ್ರತಿನಿಧಿಗಳು ವಾಹನದಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಅರಣ್ಯ ಉತ್ಪನ್ನ ಸಾಗಿಸಲು ಶಾಮೀಲಾಗಿದ್ದಾರೆಯೇ? ಹಾಗೂ ವಾಹನದ ಮಾಲೀಕರ ಅಥವಾ ಮಾಲೀಕರ ಪ್ರತಿನಿಧಿಗಳ ಗಮನಕ್ಕೆ ಬಾರದಂತೆಯೇ ವಾಹನವನ್ನು ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಗೆ ಉಪಯೋಗಿಸಲಾಗಿದೆಯೇ ಹಾಗೂ ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರ ಅದರ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುತ್ತಾರೆಯೇ?

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ. ಅದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶದ ಮೊದಲಿನ ಭಾಗದ ಪ್ರಶ್ನೆಗೆ ಹೌದು ಎಂತಲೂ ಎರಡನೇ ಭಾಗದ ಪ್ರಶ್ನೆಗೆ ಇಲ್ಲ ಎಂದಾಗಿರುತ್ತದೆ.

ಕಾರಣಗಳು

**ಅಂಶ-1:**

ಫಿರ್ಯಾದುದಾರರಾದ ವಲಯ ಅರಣ್ಯ ಅಧಿಕಾರಿ, ಉಂಬ್ಳೆಬೈಲು ವಲಯ ಇವರು ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಈ ಪ್ರಾಧಿಕಾರಕ್ಕೆ ಹಾಜರುಪಡಿಸಿದ ದಿನಾಂಕ: 26.8.2001ರ ಪ್ರಥಮ ವರ್ತಮಾನ ವರದಿ ಮಹಜರ್ ಹಾಗೂ ಸೀಜರ್ ರಿಪೋರ್ಟ್‌ಗಳಿಂದ ದಿನಾಂಕ: 26.08.2001 ರಂದು ಉಂಬ್ಳೆಬೈಲು ಜಂಕ್ಷನ್ ರಸ್ತೆಯ ಆನೇಕಲ್ ದೇವಸ್ಥಾನ ಬಳಿ ಮುಖ್ಯ ರಸ್ತೆಯಲ್ಲಿ ರಾತ್ರಿ 8.00 ಗಂಟೆ ಸಮಯದಲ್ಲಿ ನೋಂದಾವಣೆ ಸಂಖ್ಯೆ ಕೆಎ-18-ಎಂ-122ರ ಅಂಬಾಸಿಡರ್ ಕಾರಿನಲ್ಲಿ ಸಾಗುವಾನಿ, ಬೀಟೆ ಹಾಗೂ ಶ್ರೀಗಂಧದ ತುಂಡುಗಳನ್ನು ದುಷ್ಕರ್ಮಿಗಳು ಅಕ್ರಮವಾಗಿ ಸಾಗಿಸುತ್ತಿದ್ದುದನ್ನು ವಲಯ ಅರಣ್ಯ ಅಧಿಕಾರಿ ಹಾಗೂ ಅವರ ಸಿಬ್ಬಂದಿಗಳು ಪತ್ತೆಹಚ್ಚಿ ಅರಣ್ಯ ಕಾಯಿದೆ ಪ್ರಕಾರ ಅರಣ್ಯ ಮೊಕದ್ದಮೆ ಸಂಖ್ಯೆ: 74/01-02ನ್ನು ದಾಖಲಿಸಿರುವುದು ದೃಢಪಟ್ಟಿರುತ್ತದೆ. ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಈ ಪ್ರಾಧಿಕಾರದಲ್ಲಿ ದಿನಾಂಕ: 30.10.2002 ರಂದು ಸಾಕ್ಷಿ ನುಡಿದ ಅಭಿಯೋಜನಾ ಸಾಕ್ಷಿ 1 ಶ್ರೀ ಜಿ. ವೇಣುಗೋಪಾಲ್, ವಲಯ ಅರಣ್ಯ ಅಧಿಕಾರಿ, ದಿನಾಂಕ: 26.2.2003 ರಂದು ಅಭಿಯೋಜನಾ ಸಾಕ್ಷಿ 2 ಶ್ರೀ ಸಣ್ಣೀರಪ್ಪ, ವನಪಾಲಕರು ಹೇಳಿಕೆ ನೀಡಿರುತ್ತಾರೆ. ದಿನಾಂಕ: 26.8.2001 ರಂದು ಬಂದ ಖಚಿತ ವರ್ತಮಾನದ ಮೇರೆಗೆ ಆನೇಕಲ್ ದೇವಸ್ಥಾನದ ಬಳಿ ಕಾಯುತ್ತಿರುವಾಗ್ಗೆ ಉಂಬ್ಳೆಬೈಲು ಕಡೆಯಿಂದ ಒಂದು ನೀಲಿ ಬಣ್ಣದ ಅಂಬಾಸಿಡರ್ ಕಾರು ಬಂದಿತು. ಆಗ ರಾತ್ರಿ 8.30 ಸಮಯವಾಗಿತ್ತು. ಕಾರನ್ನು ನಿಲ್ಲಿಸಲು ಪ್ರಯತ್ನಿಸಿದಾಗ ತಮ್ಮನ್ನು ದಾಟಿ ಹೋಯಿತು. ಹದಿನೈದು ಇಪ್ಪತ್ತು ಅಡಿಗಳ ಮುಂದೆ ನಮ್ಮ ಇನ್ನೊಂದು ಜೀಪು ಅಡ್ಡ ನಿಲ್ಲಿಸಿದಾಗ ಕಾರಿನಲ್ಲಿದ್ದ ವ್ಯಕ್ತಿಗಳು ಕಾರನ್ನು ಬಿಟ್ಟು ಓಡಿ ಪರಾರಿಯಾಗಿರುತ್ತಾರೆ. ಕಾರನ್ನು ತಪಾಸಣೆ ಮಾಡಿದಾಗ ಸದರಿ ಕಾರಿಗೆ ಚಾಲಕ ಕೂರುವ ಸೀಟು ಮಾತ್ರ ಇದ್ದು ಉಳಿದ ಆಸನದ ವ್ಯವಸ್ಥೆ ತೆಗೆಯಲಾಗಿತ್ತು. ಕಾರಿನ ಒಳಗೆ ಒಂದು ಸಾಗುವಾನಿ, ಮೂರು ಬೀಟೆ ತುಂಡುಗಳು ಇದ್ದು ಡಿಕ್ಕಿಯಲ್ಲಿ ಶ್ರೀಗಂಧದ ಸಣ್ಣ ಸಣ್ಣ ಚಕ್ಕೆಗಳನ್ನು ಗೋಣಿಚೀಲದಲ್ಲಿ ತುಂಬಲಾಗಿತ್ತು. ಕಾರಿನ ನಂ. ಕೆಎ-18-ಎಂ122 ಆಗಿತ್ತು. ಅವುಗಳನ್ನು ಪಂಚರ ಸಮಕ್ಷಮ ಅಮಾನತ್ತುಪಡಿಸಲಾಯಿತು. ಸಾಗುವಾನಿ ಮತ್ತು ಬೀಟೆ ತುಂಡುಗಳನ್ನು ಅಳತೆ ಮಾಡಿ ಅವುಗಳಿಗೆ ಬಿಳಿ ಬಣ್ಣದಿಂದ ಕ್ರಮ ಸಂಖ್ಯೆ ಕೊಟ್ಟು ಇಲಾಖಾ ಛಾಪಾ ಕೆ-ಎಸ್-ಎಫ್-ಡಿ-ಆರ್ 2 ಬಿಬಿ ಹಾಕಲಾಯಿತು. ಶ್ರೀಗಂಧದ ಬಗ್ಗೆ ವೈರ್‌ಲೆಸ್ ಮುಖಾಂತರ ತಕ್ಕಡಿ ತರಿಸಿ ತೂಕ ಮಾಡಲಾಯಿತು. ಒಟ್ಟು 29 ಕೆಜಿ ಹಾಗೂ ಅರಣ್ಯ ಮೊಕದ್ದಮೆ ಸಂಖ್ಯೆ: ಎ74/01-02ನ್ನು ಸಾಗುವಾನಿ, ಬೀಟೆ ತುಂಡುಗಳ ಮೇಲೆ ಬರೆಯಲಾಯಿತು. ಸ್ಥಳದಲ್ಲಿ ಪಂಚನಾಮೆಯನ್ನು ಜರುಗಿಸಲಾಯಿತು. ನಂತರ ವಾಹನ ಮತ್ತು ಅರಣ್ಯ ಉತ್ಪನ್ನಗಳನ್ನು ವಲಯ ಅರಣ್ಯ ಅಧಿಕಾರಿಗಳ ಕಛೇರಿ ಉಂಬ್ಳೆಬೈಲು ಕಛೇರಿಗೆ ತೆಗೆದುಕೊಂಡು ಹೋಗಲು ತೀರ್ಮಾನಿಸಲಾಯಿತು. ಈ ಬಗ್ಗೆ ಪ್ರಥಮ ವರ್ತಮಾನ ವರದಿಯನ್ನು ನಿಶಾನೆ ಪಿ1 ಮತ್ತು ಸಾಕ್ಷಿದಾರರ ಸಹಿಯನ್ನು ಪಿ1ಎ ಎಂದು ಗುರುತಿಸಲಾಯಿತು. ಸ್ಥಳ ಪಂಚನಾಮೆಯನ್ನು ನಿಶಾನೆ ಪಿ2 ಎಂದು ಸಾಕ್ಷಿದಾರರ ಸಹಿಯನ್ನು ಪಿ2ಎ ಮತ್ತು ಬಿ ಎಂದು ಗುರುತಿಸಲಾಯಿತು.

ಈ ಪ್ರಕರಣದಲ್ಲಿ ಅರ್ಜಿದಾರರ ಪರ, ವಕೀಲರು ಮಾಡಿದ ಪಾಟೀಸವಾಲಿನಲ್ಲಿ ಅಮಾನತ್ತುಪಡಿಸಿಕೊಂಡ ವಾಹನದಲ್ಲಿ ಮರವನ್ನು ಕತ್ತರಿಸುವ ಯಾವುದೇ ಸಾಧನಗಳು ಇರಲಿಲ್ಲ. ತನಿಖೆ ಕಾಲದಲ್ಲಿ ಓಡಿ ಹೋದ ವ್ಯಕ್ತಿಗಳು ಯಾರು ಎಂದು ಗೊತ್ತಾಗಲಿಲ್ಲ. ವಾಹನದ ಮಾಲೀಕರ ಪಾತ್ರ ಏನೂ ಎಂದು ಗೊತ್ತಾಗಲಿಲ್ಲ. ವಾಹನದ ಮಾಲೀಕರು ಬೊಮ್ಮನಕಟ್ಟೆ ವಾಸಿ ಎಂದು ಗೊತ್ತಾಯಿತು ವಾಹನದಲ್ಲಿ ಯಾವುದೇ ಶ್ರೀಗಂಧದ ತುಂಡುಗಳು ಇರಲಿಲ್ಲ ಮತ್ತು ಸದರಿ ಮಹಜರ್ ಪ್ರಕರಣಕೋಸ್ಕರ ಕಛೇರಿಯಲ್ಲಿ ಸೃಷ್ಟಿಸಲಾಯಿತು ಎಂಬುದು ಸರಿಯಲ್ಲ. ಈ ರೀತಿ ಅಕ್ರಮ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಸಂಬಂಧಪಟ್ಟಂತೆ ಸರ್ಕಾರದ ಪರ ಅಮಾನತ್ತುಪಡಿಸಿದ ಅಂಬಾಸಿಡರ್ ಕಾರು ಸಂಖ್ಯೆ ಕೆಎ-18-ಎಂ-122 ಹಾಗೂ ಅರಣ್ಯ ಉತ್ಪನ್ನಗಳನ್ನು ದಿನಾಂಕ: 28.8.2001 ರಂದು ಈ ಪ್ರಾಧಿಕಾರದ ಮುಂದೆ ಭೌತಿಕವಾಗಿ ಹಾಜರುಪಡಿಸಿರುತ್ತಾರೆ. ಈ ಮೇಲಿನ ಅಂಶ ಹಾಗೂ ಕಾರಣಗಳಿಂದಾಗಿ ಒಂದನೇ ಅಂಶಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ-2:**

ಈ ಪ್ರಕರಣದಲ್ಲಿ ಅಮಾನತ್ತುಪಡಿಸಿದ ಕೆಎ-18-ಎಂ-122ರ ಅಂಬಾಸಿಡರ್ ಕಾರು ವಾಹನದ ಮಾಲೀಕರಾದ ಶ್ರೀ ಹೆಚ್. ಸತ್ಯನಾರಾಯಣ ಬಿನ್ ಹುಚ್ಚಪ್ಪ ಬೊಮ್ಮನಕಟ್ಟೆ ಗ್ರಾಮ ಭದ್ರಾವತಿ ತಾ. ಇವರು ದಿನಾಂಕ: 29.9.2001 ರಂದು ಈ ಪ್ರಾಧಿಕಾರದಲ್ಲಿ ವಾಹನವನ್ನು ಮಧ್ಯಂತರ ಸ್ವಾಧೀನಕ್ಕೆ ಬಿಡುಗಡೆ ಮಾಡಲು ಕೋರಿ ಅರ್ಜಿಸಲ್ಲಿಸಿದ್ದು ಸದರಿ ಅರ್ಜಿದಾರರಿಗೆ 15.12.2001 ರಂದು ಕಾರಣ ಕೇಳಿ ತಿಳುವಳಿಕೆ ಪತ್ರವನ್ನು ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ) ಪ್ರಕಾರ ನೀಡಿರುತ್ತದೆ. ಅರ್ಜಿದಾರರು ದಿನಾಂಕ: 26.12.2001 ರಂದು ಸಮಜಾಯಿಷಿ ನೀಡಿರುತ್ತಾರೆ. ಅಲ್ಲದೆ ತದ ನಂತರ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಈ ಪ್ರಾಧಿಕಾರದಲ್ಲಿ ನಡೆದ ವಿಚಾರಣೆಗೆ ಅರ್ಜಿದಾರರು ಹಾಗೂ ಅವರ ನ್ಯಾಯವಾದಿಗಳು ಹಾಜರಾಗಿರುತ್ತಾರೆ. ಈ ಪ್ರಕಾರ ಆರ್.ಸಿ. ಮಾಲೀಕರವರಿಗೆ ಅವಕಾಶ ನೀಡಿರುವುದಾಗಿ ತೀರ್ಮಾನಿಸಿರುತ್ತೇನೆ. ಆದ ಕಾರಣ ಅಂಶ: 2ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ-3:**

ದಿನಾಂಕ: 29.9.2001 ರಂದು ಶ್ರೀ ಹೆಚ್. ಸತ್ಯನಾರಾಯಣ ಬಿನ್ ಹುಚ್ಚಪ್ಪರೆಡ್ಡಿ ಬೊಮ್ಮನಕಟ್ಟೆ, ಭದ್ರಾವತಿ ಇವರು ವಕೀಲರ ಮುಖಾಂತರ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ. ವಾಹನವನ್ನು ಬಾಡಿಗೆ ಉದ್ದೇಶಕ್ಕಾಗಿ ಬಳಸುತ್ತಿದ್ದು ಸದರಿ ವಾಹನ ಬಾಡಿಗೆ ಹಣದಿಂದ ಜೀವನ ಸಾಗಿಸುತ್ತಿರುತ್ತೇನೆ. ವಾಹನದಲ್ಲಿ ನಡೆದ ಅರಣ್ಯ ಅಪರಾಧ ಪ್ರಕರಣಕ್ಕೂ ನನಗೂ ಯಾವುದೇ ಸಂಬಂಧ ಇರುವುದಿಲ್ಲ ವಾಹನವನ್ನು ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ಈ ಪ್ರಕರಣದ ಬಗ್ಗೆ ವಾಹನದ ಮಾಲೀಕರಿಗೆ ದಿನಾಂಕ: 15.12.2001 ರಂದು ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೋಡಿರುತ್ತದೆ. ವಾಹನದ ಮಾಲೀಕರು ದಿನಾಂಕ: 26.12.2001 ರಂದು ಸಮಜಾಯಿಷಿ ನೀಡಿರುತ್ತಾರೆ. ದಿನಾಂಕ: 25.08.2001 ರಂದು ಆಯುರ್ವೇದಿಕ್ ಔಷಧಿ ತರಲು ಅಂಕೋಲಕ್ಕೆ ಹೋಗಿರುತ್ತೇನೆ. ಔಷಧಿ ತೆಗೆದುಕೊಂಡು ದಿನಾಂಕ: 27.8.2001 ರಂದು ವಾಪಾಸ್ಸು ಬಂದಿರುತ್ತೇನೆ. ಆ ಸಮಯದಲ್ಲಿ ವಾಹನವನ್ನು ಅಲ್ತಾಫ್ ಅಹಮದ್ ಎಂಬ ಚಾಲಕನಿಗೆ ಕೊಟ್ಟಿರುತ್ತೇನೆ. ನಂತರ ಚಾಲಕನ ಮನೆಗೆ ಹೋಗಿ ವಾಹನ ವಿಚಾರಿಸಿದಾಗ ವಾಹನವು ಎಲ್ಲಿಗೆ ಹೋಗಿತ್ತು ಎಂದು ತಿಳಿದು ಬಂದಿರುವುದಿಲ್ಲ. ವಾಹನವು ಬಾಡಿಗೆ ಹೋಗಿರಬಹುದು ಎಂದು ತಿಳಿದುಕೊಂಡು ಸುಮ್ಮನಿದ್ದೆ 5-6 ದಿನಗಳ ನಂತರ ಕನ್ನಡ ದಿನಪತ್ರಿಕೆಯಲ್ಲಿ ವಾಹನವು ಅರಣ್ಯ ಉತ್ಪನ್ನ ಸಾಗಾಣಿಕೆಯಲ್ಲಿ ಸಿಕ್ಕಿ ಉಂಬ್ಳೆಬೈಲು ವಲಯ ಅರಣ್ಯ ಅಧಿಕಾರಿಗಳ ವಶದಲ್ಲಿದೆ ಎಂದು ತಿಳಿದು ಬಂದು ನ್ಯಾಯಾಲಯಕ್ಕೆ ವಾಹನ ಬಿಡುಗಡೆ ಬಗ್ಗೆ ಅರ್ಜಿ ಸಲ್ಲಿಸಿರುತ್ತೇನೆ. ಈ ಕೃತ್ಯದಲ್ಲಿ ನನ್ನ ಪಾತ್ರ ಇರುವುದಿಲ್ಲ ಎಂದು ಹೇಳಿ ವಾಹನ ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ. ಅರ್ಜಿದಾರರ ಅರ್ಜಿಗಳನ್ನು ಮತ್ತು ಅವರು ಸಲ್ಲಿಸಿದ ದಾಖಲಾತಿಗಳನ್ನು ಪರಿಶೀಲಿಸಿದಾಗ ಅರ್ಜಿದಾರರು ವಾಹನದ ಮಾಲೀಕರೆಂದು ಹೇಳಿಕೊಳ್ಳುತ್ತಿದ್ದು ವಾಹನದ ಉಸ್ತುವಾರಿಯ ಬಗ್ಗೆ ಸಂಪೂರ್ಣ ಹೊಣೆಗಾರಿಕೆ ಅವರದಾಗಿರುತ್ತದೆ. ಈ ಪ್ರಕರಣದಲ್ಲಿ ಯಾವುದೇ ಪಾತ್ರ ಇಲ್ಲವೆಂದು ಹೇಳುತ್ತಿದ್ದು ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ಒದಗಿಸಿರುವುದಿಲ್ಲ. ಅರ್ಜಿದಾರರು ಸಹ ಅರಣ್ಯ

ಅಪರಾಧ ಪ್ರಕರಣದಲ್ಲಿ ಭಾಗಿಯಾಗಿರುವುದು ಮೇಲುನೋಟಕ್ಕೆ ಕಂಡು ಬಂದಿರುವುದರಿಂದ ಅವರ ಮಧ್ಯಂತರ ಅರ್ಜಿಯನ್ನು ದಿನಾಂಕ: 20.03.2002 ರಂದು ತಿರಸ್ಕರಿಸಿರುತ್ತದೆ.

ಅರ್ಜಿದಾರರು ಈ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದೇ ಇದ್ದುದರಿಂದ ಈ ಪ್ರಕರಣದ ಬಗ್ಗೆ ಅಂತಿಮ ಆದೇಶ ಹೊರಡಿಸಲು ಅರ್ಜಿದಾರರ ಹೇಳಿಕೆಯನ್ನು ದಿನಾಂಕ: 25.6.2003 ರಂದು ದಾಖಲಿಸಿಕೊಳ್ಳಲಾಗಿರುತ್ತದೆ. ಅರ್ಜಿದಾರರು ಮುಖ್ಯ ವಿಚಾರಣೆಯಲ್ಲಿ ದಿನಾಂಕ: 25.8.2001 ರಂದು ನನ್ನ ವಾಹನ ಅಂಬಾಸಿಡರ್ ಕಾರು ಸಂಖ್ಯೆ: ಕೆಎ-18-ಎಂ-1224ನ್ನು ಅಲ್ತಾಫ್ ಅಹಮದ್ ಎಂದು ಚಾಲಕನಿಗೆ ಕೊಟ್ಟು ಅಂಕೋಲಕ್ಕೆ ನನ್ನ ತಾಯಿ ಪಾರ್ಶ್ವವಾಯು ಚಿಕಿತ್ಸೆಗೆ ಕರೆದುಕೊಂಡು ಹೋಗಿದ್ದೆ. ದಿನಾಂಕ: 27.8.2001 ರಂದು ಭದ್ರಾವತಿಗೆ ವಾಪಸ್ಸು ಬಂದಿರುತ್ತೇನೆ. ದಿನಾಂಕ: 28.8.01 ರಂದು ಬೆಳಿಗ್ಗೆ ವಾಹನ ಸ್ಟ್ಯಾಂಡಿಗೆ ಬಂದು ನೋಡಿದಾಗ ನನ್ನ ವಾಹನ ಇರಲಿಲ್ಲ ಡ್ರೈವರ್ ಮನೆ ಹತ್ತಿರ ಹೋದಾಗ ಡ್ರೈವರ್ ಇರಲಿಲ್ಲ ಹಾಗೂ ವಾಹನ ಇರಲಿಲ್ಲ ಮನೆ ಬಾಗಿಲು ಹಾಕಿತ್ತು. 2-3 ದಿನಗಳ ನಂತರ ನನ್ನ ವಾಹನವನ್ನು ಉಂಬ್ಳೆಬೈಲು ವಲಯ ಅರಣ್ಯ ಅಧಿಕಾರಿಗಳು ಅಮಾನತ್ತುಪಡಿಸಿಕೊಂಡಿರುತ್ತಾರೆ ಎಂದು ಸ್ಥಳೀಯ ಪತ್ರಿಕೆಯಿಂದ ತಿಳಿದು ಬಂದಿರುತ್ತದೆ. ವಾಹನವನ್ನು ಲಕ್ಷ್ಮೀ ಫೈನಾನ್ಸ್ ಬೀರೂರು ಇವರಿಂದ ಸಾಲ ಪಡೆದು ಖರೀದಿಸಿರುತ್ತೇನೆ. ವಾಹನವನ್ನು ಅಮಾನತ್ತುಪಡಿಸಿಕೊಂಡ ನಂತರ ನನಗೆ ಸಾಲದ ಹಣವನ್ನು ಕಟ್ಟಲು ಸಾಧ್ಯವಾಗಿರುವುದಿಲ್ಲ ನಾನು ಬೇರೆಯವರ ಆಟೋರಿಕ್ಷಾ ಓಡಿಸಿಕೊಂಡು ಜೀವನ ಸಾಗಿಸುತ್ತಿದ್ದೇನೆ. ವಾಹನ ಬಿಡುಗಡೆ ಮಾಡಿ ಪ್ರಕರಣವನ್ನು ಮುಕ್ತಾಯಗೊಳಿಸಬೇಕಾಗಿ ಕೋರಿರುತ್ತಾರೆ. ವಾಹನದ ಅರ್ ಸಿ ಪುಸ್ತಕ ಜೆರಾಕ್ಸ್ ಹಾಜರುಪಡಿಸಿರುತ್ತಾರೆ. ಸದರಿ ಆರ್ ಸಿ ಜೆರಾಕ್ಸ್ ಡಿ1 ಎಂದು ಹಾಗೂ ಪರ್ಮಿಟ್ಟನ್ನು ಡಿ2 ಎಂದು ಗುರುತಿಸಿರುತ್ತದೆ.

ದಿನಾಂಕ: 2.7.2003 ರಂದು ಅಭಿಯೋಜನಾ ವತಿಯಿಂದ ಪಾಟೀಸವಾಲು ಮಾಡಿರುತ್ತಾರೆ. ಅರ್ಜಿದಾರರು ಪಾಟೀ ಸವಾಲಿನಲ್ಲಿ ವಾಹನವನ್ನು ಭದ್ರಾವತಿ ವಾಸಿಯಾದ ಅಲ್ತಾಫ್ ಅಹಮದ್ ಎಂಬುವರಿಗೆ ನೀಡಿರುತ್ತೇನೆ. ಆತನ ಅಣ್ಣ ತಮ್ಮಂದಿರು ಭದ್ರಾವತಿಯಲ್ಲಿ ಇರುತ್ತಾರೆ. ನಾನು ಪೇಪರ್ ಟೌನ್ ಸ್ಟೇಷನ್‌ಗೆ ಹೋಗಿ ಅಲ್ತಾಫ್ ಮೇಲೆ ದೂರನ್ನು ಸಲ್ಲಿಸಿದೆ. ಅವರು ಇದು ಅರಣ್ಯ ಮೊಕದ್ದಮೆಗೆ ಸಂಬಂಧಿಸಿದ ವಿಷಯವೆಂದು ದೂರನ್ನು ದಾಖಲು ಮಾಡಿಕೊಳ್ಳಲಿಲ್ಲ. ನಾನು ಅರಣ್ಯ ಇಲಾಖೆಗೆ ಹೋಗಿದ್ದೆ. ಆದರೆ ವಲಯ ಅರಣ್ಯ ಅಧಿಕಾರಿಗಳು ಇರಲಿಲ್ಲ. ಆದ್ದರಿಂದ ದೂರನ್ನು ಸಲ್ಲಿಸಲು ಆಗಲಿಲ್ಲ ಡ್ರೈವರ್ ಹಳೆ ಪರಿಚಯಸ್ಥನಾಗಿದ್ದರಿಂದ ನಾನು ನನ್ನ ಕಾರಿಗೆ ನೇಮಿಸಿದ್ದೆ. ನನ್ನ ಅನುಮತಿ ಮೇಲೆ ಸದರಿ ಅಲ್ತಾಫ್ ಕಾರನ್ನು ತೆಗೆದುಕೊಂಡು ಹೋಗಿರುತ್ತಾನೆ. ಅಂದರೆ ಅದು ಸರಿಯಲ್ಲ ಸದರಿ ಕಳ್ಳ ಸಾಗಾಣಿಕೆಯಲ್ಲಿ ನನ್ನ ಪಾತ್ರ ಏನೂ ಇಲ್ಲದೇ ಇದ್ದರೆ ದೂರನ್ನು ಅರಣ್ಯ ಇಲಾಖೆಗೆ ಸಲ್ಲಿಸುತ್ತಿದ್ದೆ ಎಂದು ಹೇಳುವುದು ಸರಿಯಲ್ಲ ಎಂದು ಹೇಳಿಕೆ ನೀಡಿರುತ್ತಾರೆ.

ಅರ್ಜಿದಾರರ ವಾಹನದಲ್ಲಿ ಅರಣ್ಯ ಉತ್ಪನ್ನವಾದ ಶ್ರೀಗಂಧದ ಹಾಗೂ ಇತರೇ ಜಾತಿಯ ತುಂಡುಗಳು ಸಾಗಾಣಿಕೆಗೆ ಬಳಕೆಯಾಗದಂತೆ ವಾಹನದ ಮಾಲೀಕರು ಅಥವಾ ಅವರ ಪ್ರತಿನಿಧಿಗಳು ಯಾವುದೇ ಮುನ್ನೆಚ್ಚರಿಕೆ ವಹಿಸಿದ ಬಗ್ಗೆ ಸಮರ್ಪಕವಾಗಿ ಸಾಕ್ಷ್ಯಾಧಾರ ನೀಡಿರುವುದಿಲ್ಲ. ವಾಹನದಲ್ಲಿ ತನ್ನ ಗಮನಕ್ಕೆ ಬಾರದಂತೆ ಈ ಕೃತ್ಯ ನಡೆದಿದೆ ಎಂಬುದನ್ನು ಕರ್ನಾಟಕ ಅರಣ್ಯ ಕಾಯಿದೆ ಕಲಂ 71(ಬಿ)(2)ರ ರೀತ್ಯಾ ಸಾಬೀತುಪಡಿಸುವ ಜವಾಬ್ದಾರಿ ವಾಹನದ ಮಾಲೀಕರಿಗೆ ಸೇರಿದ್ದಾಗಿರುತ್ತದೆ. ಅಲ್ಲದೇ ವಾಹನದ ಮಾಲೀಕರ ಏಜೆಂಟರಾಗಲೀ ಚಾಲಕನಾಗಲೀ ಅಥವಾ ಇತರೆ ನಂಬಿಕೆ ಪ್ರತಿನಿಧಿಗಳು ವಾಹನದಲ್ಲಿ ಅಕ್ರಮ ಸಾಗಾಣಿಕೆ ಯಾಗದಂತೆ ಮುನ್ನೆಚ್ಚರಿಕೆ ವಹಿಸುವುದು ಸಹ ಇವರುಗಳ ಜವಾಬ್ದಾರಿಯಾಗಿರುತ್ತದೆ.

"Without prejudice to the provisions of sub-section (1), no order confiscating any tool, rope, chain, boat, vehicle or cattle shall be made under section 71A if the owner of the tool, rope, chain, boat, vehicle or cattle proves to the satisfaction of the authorised officer that it was used in carrying the timber, sandalwood, charcoal, firewood or ivory without the knowledge or connivance of the owner himself, his agent, if any, and the person in charge of the tool, rope, chain, boat, vehicle or cattle and that each of them had taken all reasonable and necessary precautions against such use."

ಅಂಬಾಸಿಡರ್ ಕಾರು ನಂ.ಕೆಎ-18-ಎಂ-122ರ ವಾಹನದಲ್ಲಿ ಅರಣ್ಯ ಉತ್ಪನ್ನವು ಕಾನೂನು ಬಾಹಿರವಾಗಿ ಸಾಗಿಸದಂತೆ ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿದ್ದೇನೆ ಎಂಬುದನ್ನು ಸಾಕ್ಷಿ ಹಾಗೂ ಪುರಾವೆಗಳ ಸಹಿತ ಈ ಪ್ರಕರಣದಲ್ಲಿ ಸಾಬೀತುಪಡಿಸಲು ವಾಹನದ ಮಾಲೀಕರು ಹಾಗೂ ಅವರ ಪರ ವಕೀಲರು ಸಂಪೂರ್ಣ ವಿಫಲಗೊಂಡಿರುತ್ತಾರಾದ್ದರಿಂದ ಪ್ರಕರಣದ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಹಾಲಿ ಪ್ರಕರಣಕ್ಕೆ ಕೇರಳ ರಾಜ್ಯದ ತೀರ್ಮಾನ ಕ್ರೈಮ್ 2000 (3) ಪುಟ 563 ಅತ್ಯಂತ ಸರಿ ಹೊಂದುವಂತಹ ತೀರ್ಮಾನವಾಗಿರುತ್ತದೆ. ಅದರ ಉದ್ಧೃತ ಭಾಗ ಈ ಕೆಳಕಂಡಂತಿದೆ.

"The contention that such a strict view would adversely affect an innocent vehicle owner cannot be countenanced since any narrow or liberal Interpretation of confiscatory provisions in the Act can eventually lead to disastrous consequences for forest wealth which is a very endangered bounty of nature. The idea behind extension of confiscatory provisions to vehicles etc., is to convey a pre-emptory and explicit message to the vehicle owners not to allow their vehicles to be used for depletion of forest wealth. if any vehicle is caught in the nefarious act of carrying illicit forest produce, it is not enough that the owner establishes his innocence along. If he wants to retrieve his vehicle he must show further that the person who was in-charge of the vehicle has taken reasonable and necessary precautionary measures against such user of the vehicle. The owner cannot rest with establishing his innocence in the matter. It may be that having succeeded in showing his innocence his failure to establish the next limb might lead to hard consequences to him. Legislature intended, by providing such stringent condition, to prevent harder consequences for the society and for the posterity".

ಕರ್ನಾಟಕ ಅರಣ್ಯ ಕಾಯಿದೆ ಕಲಂ 80ರ ಪ್ರಕಾರ ಯಾವುದೇ ಅರಣ್ಯ ಉತ್ಪನ್ನಗಳು ಅರಣ್ಯ ಪ್ರಕರಣದಲ್ಲಿ ಪ್ರಾಥಮಿಕ ಹಂತದಲ್ಲಿ ಸರ್ಕಾರದ್ದೆಂದೇ ಭಾವಿಸಬೇಕಾಗಿದ್ದು ಅಪಾದನೆ ಹೊರಿಸಲ್ಪಟ್ಟ ವ್ಯಕ್ತಿ ಅಮಾನತ್ತುಪಡಿಸಿಕೊಂಡ ಮರವು ತನಗೆ ಸೇರಿದೆ ಎಂಬುದನ್ನು ಪುರಾವೆ ಮಾಡುವ ಹೊಣೆಯನ್ನು ಹೊರಬೇಕಾಗಿರುತ್ತದೆ.

"When in any proceedings taken under this Act or in consequence of anything done under this Act or under any other law for the time being in force, a question arises as to whether any forest produce

is the property of the State Government, such produce shall be presumed to be the property of the State Government until the contrary is proved, and in case of any prosecution the burden of proving the contrary shall lie on the accused."

ಅರಣ್ಯ ಕಾಯಿದೆ 1963 ಕಲಂ 84ರ ಪ್ರಕಾರ ಶ್ರೀಗಂಧವು ಸರ್ಕಾರದ ಸ್ವತ್ತಾಗಿರುತ್ತದೆ.

1. All Sandal trees which may grow in any land after the date of the commencement of this Act, and
2. All Sandal trees existing on any land prior to the commencement of the Act. 2(***). shall be the exclusive property of the State Government.
3. (2) Where in any proceedings taken under this Act, a question arises as to whether any sandalwood is the property of the State Government, it shall, unitl the contrary is proved, be presumed to be the part of a sandal tree which was the exclusive property of the State Government under sub-section (1), and in the case of any prosecution, the burden of proving the contrary shall lie on the accused.

ಮೇಲ್ಕಂಡ ವಿದ್ಯಮಾನಗಳನ್ನು ಅವಲೋಕಿಸಿ ನೋಡಿದಾಗ ಅರ್ಜಿದಾರರ ತಿಳುವಳಿಕೆಗೆ ಬಂದು ಈ ಕೃತ್ಯ ನಡೆದಿದೆ ಹಾಗೂ ಅರ್ಜಿದಾರರು ಅಥವಾ ಅವರು ನೇಮಿಸಿದಂತಹ ವ್ಯಕ್ತಿಗಳು ಸಹ ಮೇಲ್ಕಂಡ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಯಲ್ಲಿ ಭಾಗವಹಿಸಿರುತ್ತಾರೆ ಎಂಬುದಕ್ಕೆ ಯಾವುದೇ ಸಂಶಯವಿಲ್ಲ ಹಾಗೂ ಈ ವಾಹನವನ್ನು ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುವುದಿಲ್ಲ. ಆದ್ದರಿಂದ ಈ ಕೃತ್ಯ ನಡೆದಿದೆ ಎಂದು ಅಭಿಪ್ರಾಯ ಪಡುತ್ತೇನೆ. ಆದ್ದರಿಂದ ಅಂಶ 3ನ್ನು ಇಲ್ಲ ಎಂದು ಉತ್ತರಿಸಲಾಗಿದೆ.

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿ.

1. ಭದ್ರಾವತಿ ಅರಣ್ಯ ವಿಭಾಗ ಉಂಬ್ಳೆಬಯಲು ವಲಯದ ವಲಯ ಅರಣ್ಯ ಅಧಿಕಾರಿ ಮತ್ತು ಸಿಬ್ಬಂದಿಯವರು ದಿನಾಂಕ: 26.8.2001 ರಂದು ಅಮಾನತ್ತುಪಡಿಸಿಕೊಂಡ ಅಂಬಾಸಿಡರ್ ಕಾರು ಕೆಎ-18-ಎಂ-122ರ ವಾಹನದಲ್ಲಿ ಅಕ್ರಮವಾಗಿ ಶ್ರೀಗಂಧ ಹಾಗೂ ಸಾಗಾಣಿಕೆ ಆಗಿರುವುದು ಸ್ಥಳ ಮಹಜರ್ ಪ್ರಥಮ ಮಾಹಿತಿ ವರದಿಗಳಿಂದ ಹಾಗೂ ಅಭಿಯೋಜನಾ ಸಾಕ್ಷಿದಾರರು ನೀಡಿದ ಹೇಳಿಕೆಯಿಂದ ದೃಢಪಟ್ಟಿರುತ್ತದೆ.
2. ವಾಹನದ ಮಾಲೀಕರು ವಾಹನದ ಚಾಲಕ ಅಲ್ತಾಫ್ ಅಹಮದ್ ಎಂಬುವನಿಗೆ ವಾಹನ ಕಟ್ಟಿರುತ್ತೇನೆ ಎಂದು ತಿಳಿಸಿದ್ದು ಅವರ ಮನೆ ಭದ್ರಾವತಿಯಲ್ಲಿರುತ್ತದೆ ಎಂದು ತಿಳಿಸಿರುತ್ತಾರೆ. ಆತನನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿ ವಾಹನದ ದುರುಪಯೋಗದ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿಸಬಹುದಾಗಿರುತ್ತದೆ ಆದರೆ ವಾಹನದ ಮಾಲೀಕರು ವಾಹನದ ಚಾಲಕ ಇದುವರೆವಿಗೂ ಸಹ ಸಿಕ್ಕಿರುವುದಿಲ್ಲ ಎಲ್ಲಿದ್ದಾನೆ ಎಂದು ತಿಳಿಸಿರುವುದಿಲ್ಲ ಎಂದು ಹೇಳಿಕೆ ನೀಡಿರುತ್ತಾರೆ.
3. ವಾಹನದ ಮಾಲೀಕರು ವಾಹನದ ಚಾಲಕನ ಮೇಲೆ ಯಾವುದೇ ಪೊಲೀಸ್ ಕಂಪ್ಲೈಂಟ್ ನೀಡಿರುವುದಿಲ್ಲ ಪೊಲೀಸ್ ಠಾಣೆಯಲ್ಲಿ ದೂರನ್ನು ದಾಖಲು ಮಾಡಿಕೊಂಡಿರುವುದಿಲ್ಲ ಎಂದು ನ್ಯಾಯಾಲಯಕ್ಕೆ ತಿಳಿಸಿದ್ದು ಇದು ಸುಳ್ಳು ಎಂಬುದು ಸ್ಪಷ್ಟವಾಗಿ ಕಂಡು ಬರುತ್ತದೆ.
4. ವಾಹನದ ಮಾಲೀಕರು ಅವರ ತಾಯಿಗೆ ಔಷಧಿ ಖರೀದಿಸಲು ಅಂಕೋಲಕ್ಕೆ ದಿನಾಂಕ: 25.8.2001ಕ್ಕೆ ಹೋಗಿರುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ ಈ ಬಗ್ಗೆ ಅಧಿಕೃತವಾದ ಯಾವುದೇ ದಾಖಲಾತಿಗಳನ್ನು ನ್ಯಾಯಾಲಯಕ್ಕೆ ಒಪ್ಪಿಸಿರುವುದಿಲ್ಲ.
5. ಅರಣ್ಯ ಕಾಯಿದೆ 1963 ನಿಯಮ 71 (ಎ) ಯಿಂದ 71(ಬಿ) ರಲ್ಲಿ ತಿಳಿಸಿರುವಂತೆ ಯಾವುದೇ ವಾಹನವು ಅರಣ್ಯ ಅಪರಾಧದಲ್ಲಿ ಅಕ್ರಮವಾಗಿ ತೊಡಗಿದ ಹಾಗೂ ಅಂತಹ ಅಕ್ರಮ ಚಟುವಟಿಕೆಯಲ್ಲಿ ವಾಹನದ ಮಾಲೀಕರು ಹಾಗೂ ಅವರು ನೇಮಕ ಮಾಡಿದಂತಹ ವ್ಯಕ್ತಿಗಳು ಭಾಗಿಯಾಗಿದ್ದಾರೆ ಎಂಬುದು ಸ್ಪಷ್ಟವಾಗಿ ತಿಳಿದು ಬಂದಲ್ಲಿ ವಾಹನವನ್ನು ಏಕ ಪಕ್ಷೀಯವಾಗಿ ಸರ್ಕಾರಕ್ಕೆ ಮುಟ್ಟುಗೋಲು ಮಾಡಿಕೊಳ್ಳಬಹುದಾಗಿದೆ. ಆದ್ದರಿಂದ ಈ ಕೆಳಗಿನಂತೆ ಆದೇಶ ನೀಡಲಾಗಿದೆ.

**ಅಂತಿಮ ಆದೇಶ**

ಈ ಮೇಲ್ಕಾಣಿಸಿದ ಪ್ರಕರಣಕ್ಕೆ ಸಂಬಂಧಿಸಿದಂತೆ ಎಲ್ಲಾ ಅಗತ್ಯ ದಾಖಲಾತಿಗಳನ್ನು ಪರಿಶೀಲಿಸಿ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀಮತಿ ಸೀಮಾ ಗರ್ಗ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) (2)ನೇ ತಿದ್ದುಪಡಿ ಪ್ರಕಾರ ಅಂಬಾಸಿಡರ್ ಕಾರು ನಂ. ಕೆಎ-18-ಎಂ-122 (ಅಸಲು ಸಂಖ್ಯೆ: ಕೆಎ-18-ಎಂ-1224 (ಛಾಸೀಸ್ ಸಂಖ್ಯೆ: 111-535706, ಇಂಜಿನ್ ನಂ.ಡಿ-317466 ಮತ್ತು ಅದರಲ್ಲಿದ್ದ 1 ಚೀಲ ಸಣ್ಣ ಬೇರು ಚಕ್ಕೆಗಳು (27 ಕೆಜಿ) ಒಂದು ಸಾಗುವಾನಿ ಸೈಜು ಹಾಗೂ ಮೂರು ಬೀಟೆ ಸೈಜುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಿದ್ದೇನೆ. ಇಲಾಖಾ ಕಾನೂನು ಪ್ರಕಾರ ವಿಲೇ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳಲು ಆದೇಶಿಸಿದೆ. ಸದರಿ ವಾಹನವು ಎಲ್ಲಾ ಋಣಭಾರಗಳಿಂದ ಮುಕ್ತವಾಗಿದೆ.

ಈ ಆದೇಶವನ್ನು ದಿನಾಂಕ: 18.05.2005 ರಂದು ತೆರೆದ ನ್ಯಾಯಾಲಯದಲ್ಲಿ ಉಚ್ಚರಿಸಲಾಗಿದೆ. ಈ ಆದೇಶವು ದಿನಾಂಕ: 18.05.2005 ರಿಂದ 30 ದಿವಸಗಳ ಒಳಗೆ ವಾಹನದ ಮಾಲೀಕರು ಮೇಲ್ಮನವಿ ಸಲ್ಲಿಸದೇ ಇದ್ದರೇ ಇದೇ ಅಂತಿಮ ಆದೇಶವಾಗಿರುತ್ತದೆ.

ಸೀಮಾಗರ್ಗ್

ಪಿ.ಆರ್.910

ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಭದ್ರಾವತಿ ವಿಭಾಗ, ಭದ್ರಾವತಿ.

**OFFICE OF THE PRL. DISTRICT & SESSIONS JUDGE BIJAPUR**
**Notice U/R. 6(2) of the Notaries rules, 1956**
**BIJAPUR DATED: 10th June 2005**

Where as the below mentioned Advocates of Muddebihal taluka have made the applications under Rule 4 (2) of the Notaries Rule, 1956 for appointing them as a notary in the form of memorial for Revenue taluka of Muddebihal. Therefore, objections if any, for the appointment of the below mentioned applicants as notary for Revenue Taluka of Muddebihal, be submitted to the under signed within 14 days from the date of publication of this notice in the Karnataka Gazette.

1. Sri S. S. Malagatti Advocate Netaji Nagar Muddebihal.
2. Sri S. S. Hugar Advocate Lingaraj Nilay Basava Nagar Muddebihal.
3. Sri H. R. Makandar Advocate Near D.C.C. Bank Muddebihal.
4. Sri N. C. Muddebihal. Advocate Vinayak Nagar Muddebihal.
5. Sri G. P. Sajjan Advocate Near Sharada Devi Temple Muddebihal.
6. Sri M.A. Muddebihal Advocate Bahar Peth Old Hospital Road Muddebihal.
7. Sri S. N. Yalawar Advocate Sri Sai Nagar Bijapur Road Muddebihal.
8. Sri M. Navadagi Advocate Amareshwar Nilay IV ward Near fort Muddebihal.
9. Sri P. N. Biradar Advocate Vidya Nagar Muddebihal.
10. Sri M. S. Amlyal Advocate Santhosh Nagar Alamatti Road Near I. B. Muddebihal.
11. Sri B. S. Bidarkundi Advocate Kadi Street Muddebihal.

**Prakash Ballari**
PR-911 Prl. District & Sessions Judge, Bijapur.

## ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು

**ವಿಷಯ :** 2004ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ಜಯರಾಮ ಇವರು ಎಸಗಿರುವ ದುರಾಚಾರ-ದಂಡನೆ ವಿಧಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1. 2004ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗೆ ಶ್ರೀ ಜಯರಾಮ ಇವರ ಅರ್ಜಿ ದಿನಾಂಕ: 8.10.2005

2. ಶ್ರೀ ಜಯರಾಮ ಇವರಿಗೆ ಕಾರಣಕೇಳಿ ನೋಟೀಸು ಸಂಖ್ಯೆ: ಆರ್.ಹೆಚ್.ಎಸ್.279/2004-05/ಪಿಎಸ್‌ಸಿ ದಿನಾಂಕ: 23.03.2005.

**ಪ್ರಸ್ತಾವನೆ:**

ಕರ್ನಾಟಕ ಲೋಕಸೇವಾ ಆಯೋಗವು ನಡೆಸಿದ 2004ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಶ್ರೀ ಜಯರಾಮ (ನೋಂದಣಿ ಸಂಖ್ಯೆ: 24454) ಸಿವಿಲ್ ಪೊಲೀಸ್ ಪೇದೆ-660, ದುದ್ದ ಪೊಲೀಸ್‌ಠಾಣೆ, ಹಾಸನ ತಾ ಮತ್ತು ಜಿಲ್ಲೆ, ಇವರು ಅಕೌಂಟ್ಸ್ ಹೈಯರ್ ಪತ್ರಿಕೆ-1ಕ್ಕೆ ದಿನಾಂಕ: 30.11.2004ರಂದು ಸರ್ಕಾರಿ ಬಾಲಕಿಯರ ಪದವಿ ಪೂರ್ವ ಕಾಲೇಜು (ಪ್ರಧಾನ) ಹಾಸನದ ಪರೀಕ್ಷಾ ಕೇಂದ್ರದಲ್ಲಿ ಹಾಜರಾಗಿದ್ದು, ಪರೀಕ್ಷಾ ಸಮಯದಲ್ಲಿ ಹಾಸನದ ಉಪವಿಭಾಗಾಧಿಕಾರಿಗಳು ತಪಾಸಣೆ ನಡೆಸಲು ಸದರಿ ಪರೀಕ್ಷಾ ಕೇಂದ್ರಕ್ಕೆ ಭೇಟಿ ನೀಡಿದಾಗ ಅಭ್ಯರ್ಥಿಯಾದ ಶ್ರೀ ಜಯರಾಮ, ಇವರು ಅನಧಿಕೃತ ಕಾಪಿ ಚೀಟಿ ಹೊಂದಿರುವುದನ್ನು ಪತ್ತೆ ಮಾಡಿ, ಡಿಬಾರ್ ಮಾಡಿರುವುದಾಗಿ ತಿಳಿಸಿರುವ ಬಗ್ಗೆ ಪರೀಕ್ಷಾ ಮುಖ್ಯ ಪರಿವೀಕ್ಷಕರು ಹಾಗೂ ಪದನಿಮಿತ್ತ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಹಾಸನ ಇವರು ಆಯೋಗಕ್ಕೆ ವರದಿ ಸಲ್ಲಿಸಿರುತ್ತಾರೆ.

ಇಲಾಖಾ ಪರೀಕ್ಷೆಗಳನ್ನು ಬರೆಯಲು ಅಭ್ಯರ್ಥಿಗಳಿಗೆ ನೀಡಿದ ಪ್ರವೇಶ ಪತ್ರಗಳ ಹಿಂಬದಿಯಲ್ಲಿ ಮುದ್ರಿಸಿರುವ "ಅಭ್ಯರ್ಥಿಗಳಿಗೆ ಸೂಚನೆಗಳು" ಇದರಲ್ಲಿ ಇತರೆ ಸೂಚನೆಗಳೊಂದಿಗೆ ಪರೀಕ್ಷಾ ಕೊಠಡಿಯಲ್ಲಿ ಅನಧಿಕೃತ ಪುಸ್ತಕಗಳು, ಟಿಪ್ಪಣಿಗಳು, ಚೀಟಿಗಳು ಅಥವಾ ಪೇಪರುಗಳನ್ನು ತರುವುದು ನಿಷೇಧಿಸಲಾಗಿದೆಯೆಂದು ತಿಳಿಸಿದ್ದರೂ ಸಹ, ಆ ಸೂಚನೆಗಳನ್ನು ಶ್ರೀ ಜಯರಾಮ ಇವರು ಮೇಲೆ ವಿವರಿಸಿರುವಂತೆ ಉಲ್ಲಂಘಿಸಿ, ದುರಾಚಾರ ಎಸಗಿರುತ್ತಾರೆ. ಆದಕಾರಣ ಪರೀಕ್ಷಾ ಕೇಂದ್ರದ ಮುಖ್ಯಪರಿವೀಕ್ಷಕರು ಆಯೋಗಕ್ಕೆ ಸಲ್ಲಿಸಿದ ವರದಿ ಮತ್ತು ಸಂಬಂಧಿಸಿದ ದಾಖಲೆಗಳನ್ನು ಆಧಾರಿಸಿ ಸದರಿ ಅಭ್ಯರ್ಥಿಗೆ, ಮೇಲೆ (2)ರಲ್ಲಿ ಓದಲಾಗಿರುವ ಕಾರಣ ಕೇಳುವ ನೋಟೀಸನ್ನು ಜಾರಿಮಾಡಿ ಅದರಲ್ಲಿ ತಿಳಿಸಿರುವ ದಂಡನೆಯನ್ನು ಏಕೆ ವಿಧಿಸಬಾರದು ಎಂಬ ಬಗ್ಗೆ ಲಿಖಿತ ಸಮಜಾಯಿಷಿಯನ್ನು ನೀಡುವಂತೆ ಸೂಚಿಸಲಾಯಿತು. ಶ್ರೀ ಜಯರಾಮ ಇವರು ಕಾರಣ ಕೇಳುವ ನೋಟೀಸನ್ನು ದಿನಾಂಕ: 24.03.2005 ರಂದು ಸ್ವೀಕರಿಸಿದ್ದರೂ ಯಾವುದೇ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲವಾದುದರಿಂದ, ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಿ ಅದರ ಆಧಾರದ ಮೇಲೆ ಆಯೋಗವು ಕೆಳಕಂಡಂತೆ ಆದೇಶ ಮಾಡಿದೆ.

**ಆದೇಶ ಸಂಖ್ಯೆ: ಇಪ (1) 751/ 2005-06 ಪಿಎಸ್‌ಸಿ ದಿನಾಂಕ: 23ನೇ ಜೂನ್ 2005**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆ ನಡೆಸುವಿಕೆ) ನಿಯಮಾವಳಿಗಳು 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನಪತ್ರ ಸಂಖ್ಯೆ: ಆಡಳಿತ 39/93-94/ಪಿಎಸ್‌ಸಿ ದಿನಾಂಕ: 14.09.1993ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಜಯರಾಮ (ನೋಂದಣಿ ಸಂಖ್ಯೆ: 24454) ಸಿವಿಲ್ ಪೇದೆ ನಂ.660 ದುದ್ದ ಪೊಲೀಸ್‌ಠಾಣೆ, ಹಾಸನ ತಾ ಮತ್ತು ಜಿಲ್ಲೆ ಇವರಿಗೆ 2004ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಅದರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಪಿ.ಆರ್.915 ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕ ಸೇವಾ ಆಯೋಗ.

## KARNATAKA STATE BAR COUNCIL, OLD K.G.I.D. BUILDING, BANGALORE
## NOTIFICATION No. 3/2005, Dated 25th June 2005

It is hereby notified for the information of the general public and the concerned that SHRI N. SUBBARAO, B.Sc., L.L.B. Retired District & Sessions Judge, has taken charge as SECRETARY of Karnataka State Bar Council, Bangalore. All communications meant for the Council may be addressed to him by designation.

**A.R. PATIL**
PD 55 Chairman, Karnataka State Bar Council.

**G.R. STEELS & ALLOYS PRIVATE LIMITED**
**Regd Off: K.R. Puram, Whitefield Road, Bangalore-560 066**
**In the matter of the Companies Act, 1956 and**
**In the matter of G.R. Steels & Alloys Private Limited**
**(under Voluntary Liquidation)**
**FORM No. 155**
**Notice Convening final meeting**

Notice is hereby given in pursuance of section 497 that a general meeting of the members of G.R. Steels & Alloys Private Limited will be held on Thursday the 25th August, 2005 at its Registered Office at K.R. Puram, Whitefield Road, Bangalore - 560 066 at 11.00 a.m. for the purpose of having an account laid before them showing the manner in which the winding-up has been conducted and the property of the company disposed of and of hearing any explanation that may be given by the liquidator and also of determining by a special resolution of the company the manner in which the books, accounts and documents of the company and of the liquidator shall be disposed of.

Dated this 6th day of July 2005 **A.K. Wadhera,**
PD 54 Liquidator.

**PROCEEDINGS OF THE REGISTERING AUTHORITY AND REGIONAL TRANSPORT OFFICER: INDIRANAGAR:BANGALORE (EAST): BANGALORE-38**

**Present:** Afzal Ahamed Khan,
Regional Transport Officer & Registering Authority,
Indiranagar, Bangalore (East)

**Sub:** Cancellation of registration certificate in respect of M.V. No. KA-03-A-157 (A/R CAB)

**Ref:** 1. Application dated 26.5.2005.
2. IMV Reported dated 3.6.2005.

**PREAMBLE:**

The public service vehicle No. KA-03-A-157 (A/R) stands in the name of Sri Syed Hussain S/o Late Abdul Khader, No. 7, 2nd Cross, Pillanna Garden, Bangalore-45. The r/o in his letter dated 26.5.2005 stated that the vehicle is in question is not road worthy condition and beyond repairable. Under the cirumstances he has not interested to operate the vehicle on the public road and requested to cancel the registration certificate. The IMV of this office physically inspected the vehicle and reported hat the vehicle is not in view of the above facts I pass the following:-

**ORDER**

**No. RTO.BNG.E.RGN/TR.PR./KA-03-A-157/05-06, Dated 3rd June 2005**

In exercise of the powers vested under Sec. 55(1) of the Motor Vehicle Act, 1988, I Afzal Ahmed Khan, Registering Authority & Regional Transport Officer, Bangalore (East) do hereby cancel the registration & Registration Certificate of No. KA-03-A-157 w.e.f. 3.6.2005 is requested by the registered owner without prejudice and subject to recover the arrears of tax or penalty due if any found later on.

The brief description of the M.V. is as follows:

| | | |
|---|---|---|
| 1 | M.V. No. | KA-03-A-157 |
| 2 | Class of Vehicle | A/R CAB |
| 3 | Type of Body | TOURER |
| 4 | Chassis No. | IBC-008838 |
| 5 | Engine No. | RG-543655 |
| 6 | Year of Manufacture | 1995 |

**AFZAL AHMED KHAN**
PR - 917 Regional Transport Officer,
Indiranagar, Bangalore (East).

**DEPARTMENT OF COMMERCIAL TAXES**
**Office of the Assistant Commissioner of Commercial Taxes,**
**Door No. 79, Room No. 208, 2nd Floor, Lakshmi Complex,**
**1st Main Road, Sheshadripuram, Bangalore.**
**Notification No. 133/05-06, dated 15th June 2005**

In pursuance of the provisions contained in Rule 6 of Central Sales Tax (Karnataka) Rules, 1957, it is hereby notified for general information that the following declaration Form C referred to Sub-section (4) of Section 8 of Central Sales Tax Act, 1956 is declared obsolete and invalid.

| Sl.No. | C Form No. | |
|---|---|---|
| 01 | TCKR 3106963 (in Triplicate) | 1 No. (One No.) |

**M.C. SUNANDA**
PR - 918 Asst. Commissioner of Commercial Taxes,
I Addl. Circle, Bangalore.

**ಪೊಲೀಸ್ ಇನ್ಸ್‌ಪೆಕ್ಟರ್, ಜಾಲಹಳ್ಳಿ ಪೊಲೀಸ್ ಠಾಣೆ, ಬೆಂಗಳೂರು ನಗರ**

**ದಿನಾಂಕ: 13ನೇ ಜೂನ್ 2005**

**ವಿಷಯ :** ವಾರಸುದಾರರಿಲ್ಲದ ವಾಹನದ ವಾರಸುದಾರರನ್ನು ಪತ್ತೆ ಮಾಡುವ ಬಗ್ಗೆ.

**ಉಲ್ಲೇಖ:** ಜಾಲಹಳ್ಳಿ ಪೊಲೀಸ್ ಠಾಣೆಯ ಸಿಮಿಸ್ ಸಂಖ್ಯೆ: 124/203 ಪಿ.ಎಫ್. ಸಂಖ್ಯೆ: 28/2003.

ಈ ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ಈ ಕೆಳಕಂಡ ವಾಹನದ ವಾರಸುದಾರರನ್ನು ಪತ್ತೆ ಮಾಡುವ ಸಲುವಾಗಿ ಬೆಂಗಳೂರು ನಗರದ ಎಲ್ಲಾ ಪೊಲೀಸ್ ಠಾಣೆಗಳಿಗೆ ಸುತ್ತೋಲೆಯಲ್ಲಿ ವಾಹನದ ವಿವರವನ್ನು ನಮೂದಿಸಿ ವಿಚಾರಣೆ ಮಾಡಿದರೂ ಯಾರೂ ವಾರಸುದಾರರು ಇದುವರೆವಿಗೂ ಪತ್ತೆಯಾಗಿರುವುದಿಲ್ಲ. ಸದರಿ ವಾಹನದ ವಾರಸುದಾರರನ್ನು ಪತ್ತೆ ಮಾಡುವ ಸಲುವಾಗಿ ಈ ಪ್ರಕಟಣೆಯನ್ನು ಪ್ರಕಟಿಸಲಾಗಿದೆ.

| Sl.No. | C.misc. No. | P.F. No. | Vehicle Particulars |
|---|---|---|---|
| 01 | 124/2003 | 28/2003 | Suzuki Motor Cycle:- Black colour<br>Reg No. KA-14-K-4367<br>Chassis No. 8810F.148219<br>Eng No. 8810M1.95485 |

**ಪೊಲೀಸ್ ಇನ್ಸ್‌ಪೆಕ್ಟರ್**

ಪಿ.ಆರ್.919 ಜಾಲಹಳ್ಳಿ ಪೊಲೀಸ್ ಠಾಣೆ, ಬೆಂಗಳೂರು ನಗರ

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ**

**ಪ್ರಕಟಣೆ**

**ಸಂಖ್ಯೆ: ಬಿ3 ಸಿಓಎನ್ ಸಿಆರ್ 20, 24/04-05, ದಿನಾಂಕ 20ನೇ ಜೂನ್ 2005**

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಅರಣ್ಯ ಸಿಬ್ಬಂದಿಯವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ) ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನದ ತಪಶೀಲು ಈ ಕೆಳಕಂಡಂತಿರುತ್ತದೆ.

| ಕ್ರ.ಸಂ. | ವಾಹನಗಳ ವಿವರ | ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಚಾಸೀಸ್ ಸಂಖ್ಯೆ |
|---|---|---|---|---|
| 1 | ಮಾರುತಿ ಓಮಿನಿ ವ್ಯಾನ್ ನಂ. ಕೆಎ 05 ಎಂ 3912 | ಅರಣ್ಯ ಮೊಕದ್ದಮೆ ಸಂಖ್ಯೆ: 166/04-05, ದಿ: 22.3.2005 ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ತರೀಕೆರೆ | 742949 | 907781 |
| 2 | ಹಿರೋಪುಕ್ ಮೋಪೆಡ್ ನಂ. ಕೆಎ 14 ಜೆ 2405 | ಅರಣ್ಯ ಮೊಕದ್ದಮೆ ಸಂಖ್ಯೆ 225/04-05, ದಿ: 22.3.2005 | ಇಬಿ 437414<br>4ಸಿ 444259 | -- |

ಈ ಮೇಲ್ಕಂಡ ವಾಹನದ ಬಗ್ಗೆ ಯಾರೂ ವಾರಸುದಾರರು ಇಲ್ಲಿಯವರೆಗೂ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಪ್ರಕಟಣೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧವನ್ನು ಮತ್ತು ಇತರೆ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳ ಅಧಿಕೃತ ಸಮಜಾಯಿಸಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳ ಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳ ಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕಾರಿಯುತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಭದ್ರಾವತಿ ವಿಭಾಗ, ಭದ್ರಾವತಿ.

ಪಿ.ಆರ್.920

**ಕರ್ನಾಟಕ ಲೋಕಸೇವಾ ಆಯೋಗ**

**ವಿಷಯ:** 2004ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ಚನ್ನಮಲ್ಲಪ್ಪ ಬಿ ಪಾಟೀಲ್ ಇವರು ಎಸಗಿರುವ ದುರಾಚಾರ-ದಂಡನೆ ವಿಧಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) 2004ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ಚನ್ನಮಲ್ಲಪ್ಪ ಬಿ ಪಾಟೀಲ್ ಇವರ ದಿನಾಂಕ ರಹಿತ ಅರ್ಜಿ
2) ಶ್ರೀ ಚನ್ನಮಲ್ಲಪ್ಪ ಬಿ ಪಾಟೀಲ್ ಇವರಿಗೆ ಕಾರಣಕೇಳಿ ನೋಟೀಸು ಸಂಖ್ಯೆ: ಆರ್‌ಹೆಚ್‌ಎಸ್ 350/2004-05/ ಪಿಎಸ್‌ಸಿ ದಿನಾಂಕ: 22.3.2005.

**ಪ್ರಸ್ತಾವನೆ:**

ಕರ್ನಾಟಕ ಲೋಕಸೇವಾ ಆಯೋಗವು ನಡೆಸಿದ 2004ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಶ್ರೀ ಚನ್ನಮಲ್ಲಪ್ಪ ಬಿ ಪಾಟೀಲ್ ಸಿಪಿಸಿ-950, ಯಾದಗಿರಿ ಗ್ರಾಮಾಂತರ ಪೊಲೀಸ್ ಠಾಣೆ, ಯಾದಗಿರಿ, ಗುಲ್ಬರ್ಗಾ, ಇವರು ಪೊಲೀಸ್ ಮ್ಯಾನ್ಯುಯಲ್ ವಿಷಯದ ಪರೀಕ್ಷೆ ಬರೆಯಲು ಅರ್ಜಿ ಸಲ್ಲಿಸಿದ್ದು, ಆ ಪರೀಕ್ಷೆ ಬರೆಯಲು ಅವರಿಗೆ ನೋಂದಣಿ ಸಂಖ್ಯೆ: 21713ರ ಪ್ರವೇಶ ಪತ್ರವನ್ನು ಜಾರಿ ಮಾಡಲಾಗಿತ್ತು. ಆ ಪರೀಕ್ಷೆಯನ್ನು ಅವರು ದಿನಾಂಕ: 6.12.2004 ರಂದು ಸರ್ಕಾರಿ ಬಾಲಕಿಯರ ಪದವಿ ಪೂರ್ವ ಕಾಲೇಜು ಗುಲ್ಬರ್ಗಾದಲ್ಲಿ ಬರೆದಿದ್ದರು. ಆ ವಿಷಯದ

ಉತ್ತರ ಪತ್ರಿಕೆಗಳ ಮೌಲ್ಯಮಾಪನ ಕಾರ್ಯಕೈಗೊಂಡಾಗ ಸದರಿ ಶ್ರೀ ಚನ್ನಮಲ್ಲಪ್ಪ ಬಿ ಪಾಟೀಲ್ ರವರು ತಮ್ಮ ಉತ್ತರ ಪತ್ರಿಕೆಯ ಹೆಚ್ಚುವರಿ ಉತ್ತರ ಪತ್ರಿಕೆಯ ಮೊದಲ ಪುಟದಲ್ಲಿ ತಮ್ಮ ಹೆಸರು ಮತ್ತು ನೋಂದಣಿ ಸಂಖ್ಯೆಯನ್ನು ನಮೂದಿಸಿರುವುದು ಆಯೋಗದ ಗಮನಕ್ಕೆ ಬಂದಿತ್ತು. ಆದಕಾರಣ ಅವರಿಗೆ ಮೇಲೆ (2) ರಲ್ಲಿ ಓದಲಾದ, ಕಾರಣಕೇಳಿ ನೋಟೀಸನ್ನು ಜಾರಿಮಾಡಿ ಅವರಿಗೆ ನೀಡಲಾದ ಪ್ರವೇಶ ಪತ್ರದ ಹಿಂಬದಿಯಲ್ಲಿ ಮುದ್ರಿಸಿದ "ಅಭ್ಯರ್ಥಿಗಳಿಗೆ ಸೂಚನೆಗಳು" ಎಂಬುದರ ಸೂಚನೆ-4 ರಲ್ಲಿ ಹಾಗೂ ಉತ್ತರಪತ್ರಿಕೆಯಲ್ಲಿನ ಮುಖಪುಟದಲ್ಲಿ ಮುದ್ರಿಸಿದ "ಅಭ್ಯರ್ಥಿಗಳಿಗೆ ಸೂಚನೆಗಳು" ಎಂಬುದರ ಸೂಚನೆ-1 ರಲ್ಲಿ ಅಭ್ಯರ್ಥಿಗಳು ಉತ್ತರಪತ್ರಿಕೆಯ ಒಳಭಾಗದಲ್ಲಿ ಮತ್ತು ಹೆಚ್ಚುವರಿ ಉತ್ತರಪತ್ರಿಕೆಯಲ್ಲಿ ಪ್ರಶ್ನೆಗಳಿಗೆ ಉತ್ತರವನ್ನು ಮಾತ್ರ ಬರೆಯಬೇಕೇ ಹೊರತು ಇತರೇ ಯಾವುದೇ ರೀತಿಯ ಬರವಣಿಗೆ ಅಂದರೆ ತನ್ನನ್ನು ಪರಿವೀಕ್ಷಕರು ಗುರುತಿಸಿಕೊಳ್ಳುವ ಹಾಗೆ ನೋಂದಣಿ ಸಂಖ್ಯೆ: ಹೆಸರು ಇತ್ಯಾದಿಗಳು ಬರೆದಲ್ಲಿ ಕಠಿಣ ಶಿಕ್ಷೆಗೆ ಗುರಿಯಾಗುವರೆಂದು ತಿಳಿಸಿದ್ದರೂ ಸಹ ಆ ಸೂಚನೆಗಳನ್ನು ಉಲ್ಲಂಘಿಸಿ ಪೊಲೀಸ್ ಮ್ಯಾನ್ಯುಯಲ್ ವಿಷಯದ ಉತ್ತರಪತ್ರಿಕೆಯ ಹೆಚ್ಚುವರಿ ಉತ್ತರ ಪತ್ರಿಕೆಯ ಮೊದಲ ಪುಟದಲ್ಲಿ ತಮ್ಮ ಹೆಸರು ಮತ್ತು ನೋಂದಣಿ ಸಂಖ್ಯೆಯನ್ನು ಬರೆದಿದ್ದಕ್ಕೆ ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆ ನಿರ್ವಹಣೆ) ನಿಯಮಗಳು 1965ರ ನಿಯಮ 14 ರಡಿಯಲ್ಲಿನ ಅಧಿಕಾರವನ್ನು ಚಲಾಯಿಸಿ ಆ ಅಧಿವೇಶನದ ಅವರ ಅಭ್ಯರ್ಥಿತನವನ್ನು ಏಕೆ ರದ್ದುಪಡಿಸಬಾರದೆಂಬುದರ ಬಗ್ಗೆ ಲಿಖಿತ ಸಮಜಾಯಿಷಿಯನ್ನು ನೀಡುವಂತೆ ಸೂಚಿಸಲಾಯಿತು.

ಶ್ರೀ ಚನ್ನಮಲ್ಲಪ್ಪ ಬಿ ಪಾಟೀಲ್ ರವರ ಸದರಿ ನೋಟೀಸನ್ನು ದಿನಾಂಕ: 28.3.2005 ರಂದು ಸ್ವೀಕರಿಸಿದ್ದರೂ ಸಹ ಅವರು ಯಾವುದೇ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ಆದ್ದರಿಂದ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಿ ಅದರ ಆಧಾರದ ಮೇಲೆ ಆಯೋಗವು ನಿಯಮಗಳನ್ವಯ ಅವರಿಗೆ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ತೀರ್ಮಾನಿಸಿ ಈ ಕೆಳಕಂಡ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ: ಇ.ಪ.(1)762/2005-06/ಪಿಎಸ್‌ಸಿ ದಿನಾಂಕ: 30ನೇ ಜೂನ್ 2005**

ಕರ್ನಾಟಕ ಲೋಕಸೇವಾ ಆಯೋಗದ (ಸೇವಾ ಪರೀಕ್ಷೆಗಳು ನಿರ್ವಹಣೆ) ನಿಯಮಗಳು 1965ರ ನಿಯಮ-14 ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ: ಆಡಳಿತ 398/93-94/ಪಿಎಸ್‌ಸಿ ದಿನಾಂಕ: 14.7.1993 ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಚನ್ನಮಲ್ಲಪ್ಪ ಬಿ ಪಾಟೀಲ್, ಸಿಪಿಸಿ 950, ಯಾದಗಿರಿ ಗ್ರಾಮಾಂತರ ಪೊಲೀಸ್ ಠಾಣೆ, ಗುಲ್ಬರ್ಗಾ ಇವರಿಗೆ 2004ನೇ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗೆ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸಿದೆ.

ಆಯೋಗದ ಆದೇಶದ ಮೇರೆಗೆ,
ಪಿ.ಆರ್.926
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಇಲಾಖಾ ಪರೀಕ್ಷೆಗಳು, ಕರ್ನಾಟಕ ಲೋಕಸೇವಾ ಆಯೋಗ.

**ಕಂದಾಯ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಕಂಇ 316 ಮುನೋಮು 2005, ಬೆಂಗಳೂರು, ದಿನಾಂಕ 14ನೇ ಜೂನ್ 2005**

ನೋಂದಣಿ ಮತ್ತು ಮುದ್ರಾಂಕ ಕಾಯ್ದೆ 1957ರ (1957ರ ಕರ್ನಾಟಕ ಕಾಯ್ದೆ 34) ಕಲಂ 9(1)ಬಿ ರೊಂದಿಗೆ, ಕರ್ನಾಟಕ ಮುದ್ರಾಂಕ ನಿಯಮಗಳು 1958ರ ನಿಯಮ-11ಎ (3) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮೆ: Hotel Shilpashree Private Limited, Hassan ಇವರು ಒಟ್ಟು ರೂ. 45,00,000/- ರೂಪಾಯಿಗಳ ಮೌಲ್ಯದ ಷೇರುಗಳನ್ನು ವಿತರಿಸಲು ತಗಲುವ ಸಂಚಿತ ಮುದ್ರಾಂಕ ಶುಲ್ಕವನ್ನು ದಿನಾಂಕ: 23.11.2004 ರಂದು ಒಟ್ಟು ರೂ. 4,500/- (ನಾಲ್ಕು ಸಾವಿರದ ಐದುನೂರು ರೂಪಾಯಿಗಳು ಮಾತ್ರ) ರೂಪಾಯಿಗಳನ್ನು ಸಂದಾಯಿಸಿರುತ್ತಾರೆಂದು ಕರ್ನಾಟಕ ಸರ್ಕಾರವು ಪ್ರಕಟಿಸುತ್ತದೆ.

"ಸರ್ಕಾರದ ಅಧಿಸೂಚನೆ ಸಂಖ್ಯೆ ಕಂಇ 316 ಮುನೋಮು 2005, ದಿನಾಂಕ: 14.6.2005ರ ಪ್ರಕಾರ ಸಂಚಿತ ಮುದ್ರಾಂಕ ಶುಲ್ಕವನ್ನು ಮೊದಲ ಬಾರಿಗೆ ಸಂದಾಯಿಸಲಾಗಿದೆ." ಎಂಬ ಪದಗಳನ್ನು ಷೇರು ಪತ್ರಗಳ ಮೇಲೆ ಮುದ್ರಿಸಿ ಬಿಡುಗಡೆ ಮಾಡಲು ಸರ್ಕಾರವು ಅನುಮತಿ ನೀಡಿದೆ.

ಕರ್ನಾಟಕ ಮುದ್ರಾಂಕ ನಿಯಮಾವಳಿಗಳ ನಿಯಮ 11-ಎ (3)ರ ಪ್ರಕಾರ ಸದರಿ ಸಂಸ್ಥೆಯು ವರ್ಗಾಯಿಸಿದ ನಿರ್ದಿಷ್ಟ ಸಂಖ್ಯೆಯ ಈಕ್ವಿಟಿ ಷೇರುಗಳ ವರದಿಯನ್ನು ಸರ್ಕಾರಕ್ಕೆ ತಪ್ಪದೇ ಕಳುಹಿಸತಕ್ಕದ್ದು ಹಾಗೂ ಕರ್ನಾಟಕ ಮುದ್ರಾಂಕ ನಿಯಮಾವಳಿಯಲ್ಲಿನ ನಿಯಮ 11-ಎ(4)ರ ಪ್ರಕಾರ ಸರ್ಕಾರದ ಸಂಬಂಧಪಟ್ಟ ಅಧಿಕಾರಿಗಳು ಈಕ್ವಿಟಿ ಷೇರುಗಳ ವಿತರಣೆಗೆ ಸಂಬಂಧಿಸಿದಂತೆ ನಿರ್ವಹಿಸಲಾದ ರಿಜಿಸ್ಟರ್ ಪುಸ್ತಕ, ದಾಖಲೆಗಳನ್ನು ಪರಿಶೀಲಿಸಲು ಮತ್ತು ತಪಾಸಣೆ ನಡೆಸಲು ಸದರಿ ಸಂಸ್ಥೆಯು ಅವಕಾಶ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್.927
**ಡಿ.ಎನ್. ಶ್ರೀಮುಖಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ**

**ಸಂಖ್ಯೆ: ಎ3(ಬಿ1)ಅಮೊ:ಲಾರಿ:6315/2002-03, ದಿನಾಂಕ 4ನೇ ಜೂನ್ 2005**

**ಉಪಸ್ಥಿತರು:** ಶ್ರೀ ಜಿ.ಎ.ಎನ್. ಕರ್ಕಿಕರ್,
ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ವನ್ಯಜೀವಿ ವಿಭಾಗ, ಶಿವಮೊಗ್ಗ

**ಫಿರ್ಯಾದಿ:** ಶ್ರೀ ಡಿ.ಸಿ. ಉಮಾಪತಿ,
ಕುಂಸಿ ಪೊಲೀಸ್ ಠಾಣೆ, ಕುಂಸಿ.

**ಅರ್ಜಿದಾರರು:** ಶ್ರೀ ಬಿ.ಎಸ್. ವೆಂಕಟೇಶ್ ಬಿನ್ ಸಡಿಯಪ್ಪ,
ನಾಗನಪಾಳ್ಯಂ, ನಂ. 665, ಮುನಿಸ್ವಾಮಪ್ಪ ರಸ್ತೆ, ಎಮ್.ಎಸ್. ನಗರ,
ಬೆಂಗಳೂರು-33 (ಪರವಾಗಿ ಶ್ರೀ ಎನ್.ಪಿ. ಧರ್ಮರಾಜ್, ವಕೀಲರು, ಶಿವಮೊಗ್ಗ)

**ಪ್ರಕರಣದ ಹಿನ್ನೆಲೆ:**

ದಿನಾಂಕ: 9.2.2001 ರಂದು ಸಿರಿಗೆರೆ ವಲಯದ ಅರಣ್ಯ ವೀಕ್ಷಕರಾದ ಶ್ರೀ ಬಿ. ಹುಚ್ಚಪ್ಪ ರವರು, ಕುಂಸಿ ಪೊಲೀಸ್ ಠಾಣೆಗೆ ಹೋಗಿ, ಸಿರಿಗೆರೆ ವನ್ಯಜೀವಿ ಶಾಖೆಯ ವನಪಾಲಕರು ಹಾಗೂ ಸಿಬ್ಬಂದಿಗಳು ಕರ್ತವ್ಯ ನಿರ್ವಹಿಸುತ್ತಿದ್ದಾಗ ಹಣಗೆರೆ ಕಡೆಯಿಂದ ಒಂದು ಲಾರಿಯು ಹೆಡ್‌ಲೈಟ್ ಆರಿಸಿಕೊಂಡು ದಿನಾಂಕ: 9.2.2001 ರ ಬೆಳಗಿನ ಜಾವ ಸುಮಾರು 3.00 ಘಂಟೆಯ ಸಮಯದಲ್ಲಿ ತನಿಖಾ ಠಾಣೆಯ ಹತ್ತಿರ ಲಾರಿ ನಿಲ್ಲಿಸಿ ಕೆಲವು ವ್ಯಕ್ತಿಗಳು ಲಾರಿಯಿಂದ ಇಳಿದು ಕೈಯಲ್ಲಿ ದೊಣ್ಣೆಯನ್ನು ಹಿಡಿದುಕೊಂಡು ಕರ್ತವ್ಯ ನಿರತ ಅರಣ್ಯ ಸಿಬ್ಬಂದಿಗೆ ತನಿಖಾ ಠಾಣೆಯೊಳಗೆ ತಳ್ಳಿ, ದಬ್ಬಾಳಿಕೆ ಮಾಡಿ ಹೋಗಿರುತ್ತಾರೆಂದು ಹಾಗೂ ಲಾರಿಯಲ್ಲಿ ಮರದ ತುಂಡುಗಳು ತುಂಬಿ ಸಾಗಿಸುತ್ತಿದ್ದಾರೆ ಎಂಬ ಲಿಖಿತ ದೂರನ್ನು ನೀಡಿದನ್ವಯ ಠಾಣೆ ಗುನ್ನೆ ಸಿಆರ್ ನಂ. 26/2001 ದಾಖಲಿಸಿಕೊಂಡು ದೂರಿನ ಪ್ರಕಾರ ಸ್ಥಳಕ್ಕೆ ತೆರಳಿ, ಸ್ಥಳ ಪಂಚನಾಮೆ ತಯಾರಿಸಲಾಯಿತು. ಆನಂತರ ಪ್ರಕರಣದ ಆರೋಪಿ ಮತ್ತು ವಾಹನದ ಪತ್ತೆಯ ಸಲುವಾಗಿ ತನಿಖೆ ಮಾಡಿದಾಗ ತನಿಖೆಯ ಸಮಯದಲ್ಲಿ ಕೆಲವೊಂದು ವ್ಯಕ್ತಿಗಳಿಂದ ಸಂಗ್ರಹಿಸಿದ ಮಾಹಿತಿಯಂತೆ ಆಯನೂರು ವಾಸಿ ಪಿಳ್ಳೆ ಆಲಿಯಾಸ್ ಹನೀಫ್ ಎನ್ನುವನು ಈ ಪ್ರಕರಣದ ಮುಖ್ಯ ಆರೋಪಿಯೆಂದು ತಿಳಿದು ಬಂದಿದ್ದು, ಆತನ ದಸ್ತಗಿರಿಯಿಂದ ಲಾರಿಯಲ್ಲಿ ಅಕ್ರಮ ಸಾಗುವಾನಿ ತುಂಡುಗಳನ್ನು ಸಾಗಿಸಿದ್ದು, ಸಾಗಿಸಿದ್ದ ತುಂಡು ಇರುವ ಜಾಗಕ್ಕೆ ಹೋಗಿ ತುಂಡುಗಳನ್ನು ಸಹ ವಶಪಡಿಸಿಕೊಳ್ಳಲಾಯಿತೆಂದು ಹಾಗೂ ಈ ಸಂಬಂಧ ಅಕ್ರಮ ಸಾಗುವಾನಿ ತುಂಡುಗಳ ಸಾಗಾಣಿಕೆಗೆ ಎಮ್.ವೈ.ಹೆಚ್-6315 ಲಾರಿ ಉಪಯೋಗಿಸಿರುವುದು ಆತನ ಹೇಳಿಕೆಯಿಂದ ಖಚಿತಪಡಿಸಿಕೊಂಡು, ವಾಹನವನ್ನು ಸಹ ಸರ್ಕಾರದ ಪರ ವಶಪಡಿಸಿಕೊಂಡು ವಾಹನವನ್ನು 71(ಎ) ಕುರಿತು ಮುಂದಿನ ಕ್ರಮ ಕೈಗೊಳ್ಳುವ ಬಗ್ಗೆ ಪಿ.ಎಸ್.ಐ. ರವರು ಈ ಪ್ರಾಧಿಕಾರಕ್ಕೆ ದಿನಾಂಕ: 5.3.2001 ರಂದು ಹಾಜರುಪಡಿಸಿರುತ್ತಾರೆ. ಅದರಂತೆ, ಕುಂಸಿ ಪಿ.ಎಸ್.ಐ. ರವರಿಂದ ವಾಹನವನ್ನು ಇಲಾಖಾ ವಶಕ್ಕೆ ಪಡೆದುಕೊಂಡು ಈ ನ್ಯಾಯಾಲಯದ ಮುಂದಿನ ಆದೇಶ ನೀಡುವವರೆಗೂ ವಲಯ ಅರಣ್ಯಾಧಿಕಾರಿ, ಹಣಗೆರೆ ವನ್ಯಜೀವಿ ವಲಯ, ಸಿರಿಗೆರೆ ಇವರ ಸುಪರ್ದಿನಲ್ಲಿ ಸುರಕ್ಷಿತವಾಗಿ ಇಟ್ಟುಕೊಳ್ಳಲು ಈ ಪ್ರಾಧಿಕಾರದಿಂದ ದಿನಾಂಕ: 5.3.2001 ರಂದು ಆದೇಶಿಸಲಾಗಿದೆ.

ಈ ಮಧ್ಯೆ ದಿನಾಂಕ: 9.2.2001 ರಂದು ಹಣಗೆರೆ ವನ್ಯಜೀವಿ ವಲಯದ ವನಪಾಲಕರು ಸಿರಿಗೆರೆ ಅರಣ್ಯ ಉತ್ಪನ್ನ ತನಿಖಾ ಠಾಣೆಯ ಸಿಬ್ಬಂದಿಯವರು, ವಲಯ ಕಛೇರಿಗೆ ತಿಳಿಸಿದ ಮೇರೆಗೆ, ಹಣಗೆರೆ-ಸಿರಿಗೆರೆ ರಸ್ತೆಯಲ್ಲಿ ಹೋಗುತ್ತಿರುವಾಗ ಬಲಭಾಗದ ಕೂಡಿ ಮನ್ನಾಜಂಗಲಿ 1945ನೇ ಸಾಗುವಾನಿ ನೆಡುತೋಪಿನ ಮಧ್ಯ ಭಾಗದಲ್ಲಿ 11 ಮರಗಳನ್ನು ಕಡಿದಿರುವುದು ಕಂಡುಬಂದು, ಈ ಬಗ್ಗೆ ಸ್ಥಳದಲ್ಲಿ ಪಂಚನಾಮ ಕ್ರಮ ಜರುಗಿಸಿ ಸಾಗುವಾನಿ ಬುಡಗಳಿಗೆ ಹಾಗೂ ಸ್ಥಳದಲ್ಲಿದ್ದ ಸಾಗುವಾನಿ ತುಂಡುಗಳಿಗೆ ಇಲಾಖಾ ಛಾಪಾ ಮುದ್ರಿಸಿ, ಸರ್ಕಾರದ ಪರ ಅಮಾನತ್ತುಪಡಿಸಿ ಮೊಕದ್ದಮೆ ದಾಖಲು ಮಾಡಿರುತ್ತಾರೆ.

ಈ ಮಧ್ಯೆ ದಿನಾಂಕ: 20.3.2001 ರಂದು ಶ್ರೀ ವೆಂಕಟೇಶ್ ರವರು ಪ್ರಕರಣದಲ್ಲಿ ಜಪ್ತಿ ಮಾಡಲಾದ ವಾಹನ ಸಂಖ್ಯೆ ಎಮ್.ವೈ.ಹೆಚ್-6315 ರ ಮಾಲೀಕರೆಂದು ಹೇಳಿಕೊಂಡು, ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿ ವಾಹನವನ್ನು ಮಧ್ಯಂತರ ಬಿಡುಗಡೆಗೆ ಕೋರಿರುತ್ತಾರೆ.

ಅರ್ಜಿದಾರರ ಅರ್ಜಿಯ ಬಗ್ಗೆ ಸಹಾಯಕ ಅಭಿಯೋಜಕ ನಿರ್ದೇಶಕರು ತಮ್ಮ ಆಕ್ಷೇಪಣೆಯನ್ನು ದಿನಾಂಕ: 17.5.2001 ರಂದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಆನಂತರ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಪಿ.ಎಸ್.ಐ. ಕುಂಸಿಯವರು ಹಾಗೂ ವನ್ಯಜೀವಿ ವಲಯದವರು ಒಪ್ಪಿಸಿದ ದಾಖಲಾತಿಗಳನ್ನು ಮತ್ತು ಸಹಾಯಕ ಅಭಿಯೋಜಕ ನಿರ್ದೇಶಕರು ನೀಡಿದ ತಕರಾರನ್ನು ಪರಿಶೀಲಿಸಿ, ದಿನಾಂಕ: 20.3.2001 ರಂದು ವಾಹನ ಮಾಲೀಕರು ವಕೀಲರ ಮುಖಾಂತರ ಮಧ್ಯಂತರ ಬಿಡುಗಡೆಗೆ ಕೇಳಿದ ಅರ್ಜಿಯನ್ನು ತಿರಸ್ಕೃತಗೊಳಿಸಿ ದಿನಾಂಕ: 12.10.2001 ರಂದು ಆದೇಶಿಸಿದ್ದು ಇರುತ್ತದೆ. ಆನಂತರ ಈ ಪ್ರಕರಣದ ತನಿಖೆಯನ್ನು ಮುಂದುವರೆಸಿ, ವಿವಿಧ ದಿನಾಂಕಗಳಂದು ಈ ಪ್ರಾಧಿಕಾರದಲ್ಲಿ ನಡೆದ ವಿಚಾರಣೆಯಲ್ಲಿ ಅಭಿಯೋಜನಾ ಪರ 2 ಸಾಕ್ಷಿಗಳ ಹೇಳಿಕೆ ಮತ್ತು ಅರ್ಜಿದಾರರ ಪರ ವಾಹನದ ಮಾಲೀಕರ ಹೇಳಿಕೆ ಪಡೆಯಲಾಗಿದೆ. ಸಾಕ್ಷಿಗಳ ವಿಚಾರಣೆಯ ನಂತರ ಸರ್ಕಾರದ ಪರ ಹಾಗೂ ವಾಹನ ಮಾಲೀಕರ ಪರ ಸಲ್ಲಿಸಿರುವ ಸಾಕ್ಷ್ಯಾಧಾರದಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಿರುವುದು ಅಗತ್ಯವಾಗಿದ್ದು, ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1. ದಿನಾಂಕ: 9.2.2001 ರಂದು ವಾಹನ ಲಾರಿ ಎಮ್.ವೈ.ಹೆಚ್-6315 ರಲ್ಲಿ ಅಕ್ರಮವಾಗಿ ಸಾಗುವಾನಿ ತುಂಡುಗಳನ್ನು ಸಾಗಾಣಿಕೆ ಮಾಡಲಾಗಿತ್ತೆ?
2. ಈ ಪ್ರಕರಣದಲ್ಲಿ ಫಿರ್ಯಾದಿದಾರರು ಅಮಾನತ್ತು ಪಡಿಸಿದ ಅರಣ್ಯ ಉತ್ಪನ್ನಗಳ ಮಾಲೀಕತ್ವವು ಅರಣ್ಯ ಕಾಯಿದೆಯಂತೆ ಸರ್ಕಾರದ ಸ್ವತ್ತೆಂದು ಅಭಿಯೋಗವು ರುಜುವಾತುಪಡಿಸಿದೆಯೇ?
3. ಎಮ್‌ವೈಹೆಚ್-6315 ವಾಹನದ ಮಾಲೀಕನು ತನಗೆ ತಿಳಿಯದೇ ಅಕ್ರಮ ಸಾಗುವಾನಿ ತುಂಡುಗಳನ್ನು ಸಾಗಾಣಿಕೆಗೆ ವಾಹನವನ್ನು ಉಪಯೋಗಿಸದಂತೆ ಮುಂಜಾಗ್ರತಾ ಕ್ರಮವನ್ನು ಕೈಗೊಂಡಿರುವುದನ್ನು ರುಜುವಾತುಪಡಿಸಿದ್ದಾರೆಯೇ?
4. ಜಪ್ತಿ ಮಾಡಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಒಂದು ಮತ್ತು ಎರಡನೇ ಅಂಶವನ್ನು ಗುಣಾತ್ಮಕವಾಗಿ

ಮೂರನೇ ಅಂಶವನ್ನು ನಕಾರಾತ್ಮಕವಾಗಿ

ನಾಲ್ಕನೇ ಅಂಶವನ್ನು ಅಂತಿಮ ಆದೇಶದಂತೆ.

**ಅಂಶ - 1**

**ಪ್ರಾಸಿಕ್ಯೂಷನ್ ಸಾಕ್ಷಿ-1:** ಒಂದನೆಯ ಅಂಶವನ್ನು ರುಜುವಾತುಪಡಿಸಲು ಅಭಿಯೋಜನ ಪರ ಸಾಕ್ಷಿದಾರರಾದ ಈ ಪ್ರಕರಣದ ಪಿರ್ಯಾದಿದಾರರಾದ ಶ್ರೀ ಡಿ.ಸಿ. ಉಮಾಪತಿ, ಪಿ.ಎಸ್.ಐ., ಕುಂಸಿ ಇವರು ದಿನಾಂಕ: 14.2.2002 ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ಪಿ.ಡಬ್ಲ್ಯು-1 ರಂತೆ ತಮ್ಮ ಸಾಕ್ಷ್ಯವನ್ನು ನುಡಿಯುತ್ತಾ, ದಿನಾಂಕ: 12.3.1999 ರಿಂದ 28.3.2001 ರವರೆಗೆ ಕುಂಸಿ ಠಾಣೆಯ ಆರಕ್ಷಕ ಉಪ ನಿರೀಕ್ಷಕರಾಗಿ ಕೆಲಸ ಮಾಡಿರುತ್ತೇನೆ. ದಿನಾಂಕ: 9.2.2001 ರಂದು ಸಂಜೆ 5.00 ಘಂಟೆಗೆ ಸಿರಿಗೆರೆ ವಲಯದ ಸಿಬ್ಬಂದಿಯವರಾದ ಶ್ರೀ ಬಿ. ಹುಚ್ಚಪ್ಪ ನವರು ನೀಡಿದ ಲಿಖಿತ ದೂರಿನನ್ವಯ ಸ್ಥಳಕ್ಕೆ ಹೋಗಿ ಪಂಚರನ್ನು ಬರಮಾಡಿಕೊಂಡು ಸ್ಥಳ ಪಂಚನಾಮೆಯ ಪ್ರಕರಣವನ್ನು ದಾಖಲಿಸಿದ ಬಗ್ಗೆ ಪ್ರಥಮ ಮಾಹಿತಿಯನ್ನು ತಯಾರಿಸಿದ ಬಗ್ಗೆ ನುಡಿದಿರುತ್ತಾರೆ. ಆನಂತರ ತನಿಖೆಯಲ್ಲಿ ಆಯನೂರು, ಸಿರಿಗೆರೆಯ ಕೆಲವೊಂದು ವ್ಯಕ್ತಿಗಳಿಂದ ಆಯನೂರು ವಾಸಿ ಪಿಳ್ಳೆ ಆಲಿಯಾಸ್ ಹನೀಫ್ ಎನ್ನುವವನು ಈ ಪ್ರಕರಣದ ಮುಖ್ಯ ಆರೋಪಿಯಾಗಿರುತ್ತಾನೆಂದು ತಿಳಿದುಬಂದಿದ್ದು, ಆತನನ್ನು ದಸ್ತಗಿರಿ ಮಾಡಿ ವಿಚಾರಣೆ ಮಾಡಿದಾಗ ಆಯನೂರು

ಕೋಟೆ ನಾಗರಾಜ ಮತ್ತು ಇವರ 8-10 ಜನರು ಸೇರಿಕೊಂಡು ವಾಹನ ಸಂಖ್ಯೆ: ಎಮ್.ವೈ.ಹೆಚ್-6315 ರಲ್ಲಿ ಅಕ್ರಮ ಸಾಗುವಾನಿ ಮರಗಳನ್ನು ಸಾಗಾಣಿಕೆ ಮಾಡಿರುತ್ತಾನೆಂದು ನುಡಿದಿರುತ್ತಾರೆ. ಆನಂತರ ವಾಹನವನ್ನು ವಶಪಡಿಸಿಕೊಳ್ಳಲಾಯಿತೆಂದು ಈ ಬಗ್ಗೆ ಸ್ಥಳದಲ್ಲಿ ಮಹಜರ್ ಕ್ರಮವನ್ನು ಜರುಗಿಸಲಾಯಿತೆಂದು ನುಡಿದಿರುತ್ತಾರೆ. ಆನಂತರ ಸಾಗುವಾನಿ ಮರ ಕಡಿದ ಜಾಗವಾದ ಸಿರಿಗೆರೆ ಕೂಡಿ ಮನ್ನಾಜಂಗಲಿಗೆ ಹೋಗಿ, ಅರಣ್ಯ ತೋಪಿನಿಂದ ಸಾಗುವಾನಿ ಮರಗಳನ್ನು ಕಡಿದ ಬುಡಗಳ ಬಗ್ಗೆ ಮಹಜರ್ ಕ್ರಮವನ್ನು ಜರುಗಿಸಿರುವುದಾಗಿ ಹಾಗೂ ಮುಂದಿನ ಹೆಚ್ಚಿನ ತನಿಖೆಯನ್ನು ಮಾಡಲು ಅನುಕೂಲವಾಗುವಂತೆ ಮೇಲಾಧಿಕಾರಿಗಳ ಅನುಮತಿಯಂತೆ ಪ್ರಕರಣವನ್ನು ವಲಯ ಅರಣ್ಯಾಧಿಕಾರಿಗಳು, ಹಣಗೆರೆ ವನ್ಯಜೀವಿ ವಲಯ, ಸಿರಿಗೆರೆ ಇವರಿಗೆ ವರ್ಗಾಯಿಸಿರುವುದಾಗಿ ನುಡಿದಿರುತ್ತಾರೆ.

ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀ ಸವಾಲಿಗೆ ವಾಹನವು ಲೈಲಾಂಡ್ ಆಗಿರುವುದು ನಿಜವಿರುತ್ತದೆ. ತಾನು ಟ್ರಾಫಿಕ್ ಇನ್‌ಸ್ಪೆಕ್ಟರ್ ಆಗಿರುವುದು ನಿಜವಿರುತ್ತದೆ. ಈ ಪ್ರಕರಣದಲ್ಲಿ ಮಾಲೀಕರನ್ನು ವಿಚಾರಪಡಿಸಿಲ್ಲದಿರುವುದನ್ನು ಹಾಗೂ ಆಯನೂರಿನ ಹೋಟೆಲ್ ಮುಂದೆ ನಿಂತಾಗ ವಾಹನ ಅಮಾನತ್ತುಪಡಿಸಿರುವುದು ಹೌದೆಂದು, ವಾಹನವನ್ನು ಆರೋಪಿ ಹನೀಫ್ ಎನ್ನುವವರ ಹೇಳಿಕೆ ಮೇಲೆ ವಶಪಡಿಸಿರುವುದು ನಿಜವಾಗಿರುತ್ತದೆ ಎಂದು ಹಾಗೂ ವಾಹನದ ಮಾಲೀಕರಾದ ಶ್ರೀ ವೆಂಕಟೇಶ್‌ರವರು ಬೆಂಗಳೂರಿನಿಂದ ಮನೆ ವಸ್ತುಗಳನ್ನು ತೆಗೆದುಕೊಂಡು ಹೋಗಲು ಬಂದಿದ್ದು, ಮತ್ತು ಬಿಟ್ಟುಕೊಡಲು ಕೇಳಿಕೊಂಡಿರುವ ಬಗ್ಗೆ ಮತ್ತು ಲಾರಿಗೂ ನಡೆದ ಕೃತ್ಯಕ್ಕೂ ಯಾವುದೇ ಸಂಬಂಧವಿರುವುದಿಲ್ಲ ಎಂದು ಹೇಳುವುದು ಸರಿಯಿಲ್ಲವೆಂದು ಸಾಕ್ಷಿದಾರರು ಪಾಟೀ ಸವಾಲಿನಲ್ಲಿ ನುಡಿದಿರುತ್ತಾರೆ.

**ಪ್ರಾಸಿಕ್ಯೂಶನ್ ಸಾಕ್ಷಿ-2:** ಶ್ರೀ ಜಿ.ಎಸ್. ಇಗ್ನೇಶಿಯಸ್ ಬಾಬು, ವನಪಾಲಕ, ಹಣಗೆರೆ ವನ್ಯಜೀವಿ ವಲಯ ಇವರು ದಿನಾಂಕ: 6.3.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ನುಡಿದಿರುತ್ತಾರೆ. ಜನವರಿ 1998 ರಿಂದ ಆಗಸ್ಟ್ 2002 ರವರೆಗೆ ಸಿರಿಗೆರೆ ವನ್ಯಜೀವಿ ಶಾಖೆಯಲ್ಲಿ ವನಪಾಲಕರಾಗಿ ಕೆಲಸ ನಿರ್ವಹಿಸುತ್ತಿದ್ದನೆಂದು, ದಿನಾಂಕ: 9.2.2001 ರಂದು ಬೆಳಗಿನ ಜಾವ ಸಿರಿಗೆರೆ ತನಿಖಾ ಠಾಣೆಯಲ್ಲಿ ಹಣಗೆರೆ ಕಡೆಯಿಂದ ಶಿವಮೊಗ್ಗ ಕಡೆ ಒಂದು ಲಾರಿ ಬಂದಾಗ ಅಲ್ಲಿ ಇದ್ದ ಅರಣ್ಯ ಸಿಬ್ಬಂದಿಯವರು ತಪಾಸಿಸಲು ಲಾರಿಯನ್ನು ನಿಲ್ಲಿಸಲು ಸೂಚಿಸಿದಾಗ, ಲಾರಿಯ ಆಸಾಮಿಗಳು ಇಲಾಖಾ ಸಿಬ್ಬಂದಿಗಳಿಗೆ ತನಿಖೆಗೆ ಆಸ್ಪದ ಕೊಡದೆ ತನಿಖಾ ಠಾಣೆಯಿಂದ ಲಾರಿಯನ್ನು ತೆಗೆದುಕೊಂಡು ಹೋದ ವಿಷಯವನ್ನು ಅರಣ್ಯ ಸಿಬ್ಬಂದಿಯಾದ ಶ್ರೀ ಬಿ. ಹುಚ್ಚಪ್ಪನವರು ತಿಳಿಸಿದ ಮೇರೆಗೆ ಅಧೀನ ಸಿಬ್ಬಂದಿಯೊಂದಿಗೆ ಲಾರಿಯನ್ನು ಪತ್ತೆಹಚ್ಚಲು ಕಾರ್ಯೋನ್ಮುಖರಾದದ್ದು, ಆನಂತರ ಲಾರಿ ಬಂದ ಜಾಗದಲ್ಲಿ ಹೋಗಿ ಪರಿಶೀಲಿಸಿದಾಗ 1945ನೇ ಸಾಗುವಾನಿ ನೆಡುತೋಪಿನಲ್ಲಿ ಸುಮಾರು 11 ಮರಗಳನ್ನು ಕಡಿದಿದ್ದು, ತುಂಡುಗಳನ್ನು ಸಾಗಿಸಿರುವುದು ಕಂಡುಬಂದು ಈ ಬಗ್ಗೆ ಸ್ಥಳ ಪಂಚನಾಮೆ ತಯಾರಿಸಲಾಯಿತು. ಆನಂತರ ನಮ್ಮ ಸಿಬ್ಬಂದಿಯ ಮೂಲಕ ಕುಂಸಿ ಪೊಲೀಸ್‌ರವರಿಗೆ ದೂರನ್ನು ಸಲ್ಲಿಸಲು ತಿಳಿಸಿರುತ್ತೇನೆ. ಸಾಗುವಾನಿ ಮರದ ರೆಂಬೆ ಕೊಂಬೆಗಳನ್ನು ನಮ್ಮ ವಶಕ್ಕೆ ಪಡೆದು ವಲಯ ಕಛೇರಿಯಲ್ಲಿ ಶೇಖರಿಸಿರುತ್ತೇವೆ ಎಂದು ಈ ಬಗ್ಗೆ ಅರಣ್ಯ ಮೊಕದ್ದಮೆ 28/2001 ರ ಪ್ರಕಾರ ಮೊಕದ್ದಮೆಯನ್ನು ದಾಖಲು ಮಾಡಲಾಯಿತೆಂದು ಈ ಪ್ರಕರಣದ ಮುಂದಿನ ತನಿಖೆಯನ್ನು ಕುಂಸಿ ಪೊಲೀಸ್‌ರವರು ಮಾಡಿರುತ್ತಾರೆಂದು ನುಡಿದಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ, ಪ್ರಕರಣದ ಘಟನೆಯನ್ನು ನಾನು ನೋಡಿಲ್ಲವೆಂದು, ಲೈಲಾಂಡ್ ಲಾರಿಯನ್ನು ತನಿಖಾ ಠಾಣೆಯಲ್ಲಿ ಪ್ರತಿಭಟನೆಯ ನಡುವೆಯೇ ತೆಗೆದುಕೊಂಡು ಹೋಗಿರುವುದು ನಿಜವೆಂದು, ಹಾಗೂ ಲಾರಿಯನ್ನು ಪ್ರತ್ಯೇಕವಾಗಿ ನೋಡಿರುವುದಿಲ್ಲ ಎನ್ನುವುದು ನಿಜವೆಂದು ಸಾಕ್ಷಿ ನುಡಿದಿರುತ್ತಾರೆ.

ಪ್ರಾಸಿಕ್ಯೂಶನ್ ಸಾಕ್ಷಿ 1 ಮತ್ತು 2 ರವರ ಸಾಕ್ಷಿಗಳನ್ನು ಗಮನಿಸಿದಾಗ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಲಾರಿಯಲ್ಲಿ ಅಕ್ರಮ ಸಾಗುವಾನಿ ತುಂಡುಗಳು ಸಾಗಾಣಿಕೆಯಾಗಿರುವುದು ದೃಢಪಟ್ಟಿರುತ್ತದೆ. ಸಾಕ್ಷಿದಾರರು ನೀಡಿದ ಹೇಳಿಕೆಗಳು ಹಾಗೂ ಸ್ಥಳ ಪಂಚನಾಮದಲ್ಲಿನ ಅಂಶಗಳು ಒಂದಕ್ಕೊಂದು ತಾಳೆಯಾಗಿರುತ್ತದೆ. ಅಲ್ಲದೇ ಪಿಡಬ್ಲ್ಯೂ-1 ರವರು, ವಶಪಡಿಸಿಕೊಂಡ ಸಾಗುವಾನಿ ತುಂಡುಗಳನ್ನು ಮತ್ತು ಪಿಡಬ್ಲ್ಯೂ-2 ರವರ ಬುಡ ಪಂಚನಾಮದಲ್ಲಿರುವ ಅಳತೆಗಳು ಒಂದಕ್ಕೊಂದು ತಾಳೆ ಹೊಂದುತ್ತದೆ. ಯಾವುದೇ ವ್ಯತಿರಿಕ್ತ ಹೇಳಿಕೆಗಳು ಬಂದಿರುವುದಿಲ್ಲ. ಅವರುಗಳು ನೀಡಿದ ಸಾಕ್ಷಿಯು ನಂಬುವಂತಾಗಿರುತ್ತದೆ. ಅಲ್ಲದೇ ಪಾಟೀ ಸವಾಲಿನಲ್ಲಿಯೂ ಸಹ ಅರ್ಜಿದಾರರ ಪರ ಪ್ರಶ್ನೆಗೆ ವಕೀಲರು ಸೂಕ್ತವಾದ ಉತ್ತರಗಳೇ ನೀಡಿದ್ದರಿಂದ ವಾಹನದಲ್ಲಿ ಅಕ್ರಮ ಸಾಗುವಾನಿ ತುಂಡು ಸಾಗಾಣಿಕೆ ಆಗಿರುವುದು ದೃಢಪಟ್ಟಿರುತ್ತದೆ. ಈ ಮೇಲಿನ ಕಾರಣದಿಂದಾಗಿ ಒಂದನೇ ಅಂಶಕ್ಕೆ ಗುಣಾತ್ಮಕವಾಗಿ ಪರಿಗಣಿಸುತ್ತೇನೆ.

**ಅಂಶ - 2**

ದಿನಾಂಕ: 9.2.2001 ರಂದು ವನಪಾಲಕರು ಹಾಗೂ ಪಿ.ಎಸ್.ಐ. ರವರು ಪಂಚನಾಮೆಯಲ್ಲಿ ಅಮಾನತ್ತುಪಡಿಸಿದ ಸಾಗುವಾನಿ ತುಂಡುಗಳು ಲಾರಿ ಸಂಖ್ಯೆ ಎಮ್.ವೈ.ಹೆಚ್-6315 ರಲ್ಲಿ ಸಾಗಾಣಿಕೆ ಆಗಿದೆ ಎಂಬುದಾಗಿ ಅಭಿಯೋಜನಾ ಪರ ಸಾಕ್ಷಿಗಳು ಮತ್ತು ನಿಶಾನೆಗಳಿಂದ ದೃಢಪಟ್ಟಿದೆ.

ಕರ್ನಾಟಕ ಅರಣ್ಯ ಕಾಯಿದೆ 80ರ ಪ್ರಕಾರ ಯಾವುದೇ ಅರಣ್ಯ ಪ್ರಕರಣದಲ್ಲಿ ವಶಪಡಿಸಿಕೊಂಡ ಅರಣ್ಯ ಉತ್ಪನ್ನವು ಪ್ರಾಥಮಿಕ ಹಂತದಲ್ಲಿ ಸರ್ಕಾರದ್ದೆಂದೇ ಭಾವಿಸಬೇಕಾಗಿದ್ದು, ಆಪಾದನೆ ಹೊರಿಸಲ್ಪಟ್ಟ ವ್ಯಕ್ತಿ ಅಮಾನತ್ತುಪಡಿಸಿಕೊಂಡ ಮರವು ತನಗೆ ಸೇರಿದೆ ಎಂಬುದನ್ನು ಪುರಾವೆಯಿಂದ ದೃಢಪಡಿಸುವ ಹೊಣೆಯನ್ನು ಹೊರಬೇಕಾಗಿರುತ್ತದೆ.

ಈಗಾಗಲೇ ಅಭಿಯೋಜನೆಯು ಸಾಕ್ಷ್ಯಾಧಾರದಿಂದ ಅಮಾನತ್ತುಪಡಿಸಿಕೊಂಡ ಲಾರಿಯಲ್ಲಿ ಮರಮುಟ್ಟು ಸಾಗಾಣಿಕೆಯಾಗಿರುವುದು ದೃಢಪಟ್ಟಿರುವುದೆಂದು ಅದು ಕೂಡಿ ಮನ್ನಾಜಂಗಲಿಯ 1945ನೇ ಸಾಗುವಾನಿ ನೆಡುತೋಪಿನಲ್ಲಿ ಕಡಿತಲೆಯಾಗಿರುವ ಮರಮುಟ್ಟುಗಳೇ ಸದರಿ ಲಾರಿಯಲ್ಲಿ ಸಾಗಾಣಿಕೆಯಾಗಿರುವುದರಿಂದ ಸದರಿ ಮರಮುಟ್ಟುಗಳು ಸರ್ಕಾರದ್ದೆಂದು ಈಗಾಗಲೇ ರುಜುವಾತು ಆಗಿರುತ್ತದೆ. ಇದರಿಂದ 2ನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದು ಅಭಿಪ್ರಾಯಪಡುತ್ತೇನೆ.

**ಅಂಶ - 3**

**ಡಿ.ಡಬ್ಲ್ಯೂ-1:** ಈ ಪ್ರಕರಣದಲ್ಲಿ ಅಮಾನತ್ತುಪಡಿಸಿದ ಲಾರಿಯ ಎಮ್.ವೈ.ಹೆಚ್-6315 ರ ಮಾಲೀಕರಾದ ಶ್ರೀ ಬಿ.ಎಸ್. ವೆಂಕಟೇಶ್ ಬಿನ್ ಪೆರುಮಾಳ್ ಸೆಡಿಯಪ್ಪ, ಕಾಂಟ್ರಾಕ್ಟರ್, ಬೆಂಗಳೂರು ಇವರು ದಿನಾಂಕ: 20.11.2004 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ಲಾರಿ ಸಂಖ್ಯೆ: ಎಮ್.ವೈ.ಹೆಚ್-6315 ನನ್ನ ಮಾಲೀಕತ್ವದಲ್ಲಿರುತ್ತದೆ, ನನ್ನ ಟ್ರಕ್ ಚಾಲಕ ಶ್ರೀ ಸುಬಾನ್ ಎನ್ನುವವರು ಬೆಂಗಳೂರಿನಿಂದ 2001ನೇ ಸಾಲಿನಲ್ಲಿ ಮನೆಯ ಸಾಮಾನುಗಳನ್ನು ಶಿವಮೊಗ್ಗ ಜಿಲ್ಲೆಯ ಆಯನೂರಿನ ಯಾವುದೋ ಹಳ್ಳಿಗೆ ಸಾಗಾಣಿಕೆ ಮಾಡಲು ತೆಗೆದುಕೊಂಡು ಹೋಗಿದ್ದನು. ಸದರಿ ಚಾಲಕ ಬಾಡಿಗೆ ಮೇಲೆ ವಾಹನವನ್ನು ತೆಗೆದುಕೊಂಡು ಹೋಗಿದ್ದ. ಚಾಲಕನ ತಂದೆಯ ಮನೆಯಾದ ಆಯನೂರು ವಾಸದ ದಾದಾಪೀರ್ ರವರ ಮನೆಯ ಮುಂದೆ ಬೆಳಗಿನ ಜಾವ 5.00 ಗಂಟೆಗೆ ವಾಹನ ನಿಲ್ಲಿಸಿದ್ದನೆಂದು ಹೇಳಿದನು. ಲಾರಿಯು

ಬೆಂಗಳೂರಿನಿಂದ ಕಳ್ಳತನವಾಗಿರುವುದಾಗಿ ಕುಂಸಿ ಪಿ.ಎಸ್.ಐ. ರವರು ಡೂಪ್ಲಿಕೇಟ್ ಕೀಯಿಂದ ವಾಹನ ಪೊಲೀಸ್ ಠಾಣೆಗೆ ತೆಗೆದುಕೊಂಡು ಹೋಗಿದ್ದಾಗಿ ತಿಳಿದು ಬಂತು, ನನಗೆ ವಿಷಯ ತಿಳಿದು ಬಂದಾಗ ಕುಂಸಿ ಪೊಲೀಸ್‌ರವರು ನನ್ನ ಲಾರಿಯನ್ನು ಅರಣ್ಯ ಮೊಕದ್ದಮೆಯಲ್ಲಿ ಶಾಮೀಲಾದ್ದರಿಂದ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ರವರಲ್ಲಿ ಹಾಜರುಪಡಿಸಿರುತ್ತಾರೆಂದು ತಿಳಿದು ಬಂತು. ನನ್ನ ಲಾರಿಯು ಈ ಹಿಂದೆ ಈ ಭಾಗಕ್ಕೆ ಬಂದಿರುವುದಿಲ್ಲ ಹಾಗೂ ಲಾರಿಯಲ್ಲಿ ಅರಣ್ಯ ಉತ್ಪನ್ನ ಸಾಗಿಸಿದ್ದು ಇರುವುದಿಲ್ಲ. ಪೊಲೀಸ್‌ರವರು ಸುಳ್ಳು ಕೇಸು ಹಾಕಿ ಪ್ರಕರಣದಲ್ಲಿ ಸಿಲುಕಿಸಿರುತ್ತಾರೆ. ಲಾರಿಯನ್ನು ಬಿಟ್ಟುಕೊಡುವಂತೆ ಕೇಳಿ ಕೊಂಡಿರುವುದಾಗಿ ಹೇಳಿಕೆ ನೀಡಿರುತ್ತಾರೆ.

ಮಾನ್ಯ ಸಹಾಯಕ ಅಭಿಯೋಜಕ ನಿರ್ದೇಶಕರವರ ಪಾಟೀ ಸವಾಲಿಗೆ ಉತ್ತರಿಸುತ್ತಾ, ಲಾರಿಯ ಚಾಲಕ ಶ್ರೀ ಹನೀಫ್ ಆಗಿರುವುದಿಲ್ಲ. ಹನೀಫ್ ಚಾಲಕನಿಂದ ಲಾರಿ ಉಪಯೋಗಿಸಲಾಗುತ್ತಿತ್ತು ಎನ್ನುವುದು ಸುಳ್ಳು. ದಿನಾಂಕ: 9.2.2001 ರಂದು ಸಿರಿಗೆರೆ ಅರಣ್ಯ ಪ್ರದೇಶದಿಂದ ಸಾಗುವಾನಿ ನಾಟಾವನ್ನು ಲಾರಿಯಲ್ಲಿ ಸಾಗಿಸುತ್ತಿದ್ದಾಗ, ದಬ್ಬಾಳಿಕೆಯಿಂದ ನಡೆಸಿಕೊಂಡು ಹೋದದ್ದು ಎನ್ನುವುದು ಸುಳ್ಳು ಮತ್ತು ಕುಂಸಿ ಪೊಲೀಸ್ ತನಿಖೆ ವೇಳೆ ಹನೀಫ್‌ನನ್ನು ವಿಚಾರಣೆಯಿಂದ ಆಯನೂರು ಕೋಟೆ ನಾಗರಾಜ ಎನ್ನುವನ ಹಿತ್ತಲಲ್ಲಿ ದಾಸ್ತಾನು ಮಾಡಿದ್ದ ಸಾಗುವಾನಿ ತುಂಡುಗಳನ್ನು ವಶಪಡಿಸಿಕೊಂಡಿರುವುದನ್ನು ಸದರಿ ಲಾರಿಯಲ್ಲಿ ಸಾಗಾಣಿಕೆಯಿಂದ ಹೋಗಿರುವುದು ಸಹ ಸುಳ್ಳು. ಕುಂಸಿ ಪೊಲೀಸರು ಪ್ರಕರಣವನ್ನು ಅರಣ್ಯ ಇಲಾಖೆಗೆ ಕೊಟ್ಟು ನಂತರ ಪ್ರಕರಣ ಜಾರಿಗೊಳಿಸಲು ತನ್ನನ್ನು ಪಾಟಿಯನ್ನಾಗಿ ಮಾಡಿರುವುದು ನಿಜವೆಂದು ತಿಳಿಸಿರುತ್ತಾರೆ. ಲಾರಿಯನ್ನು ಅಕ್ರಮ ಚಟುವಟಿಕೆಗೆ ಉಪಯೋಗಿಸದಂತೆ ಮುಂಜಾಗ್ರತಾ ಕ್ರಮ ಕೈಗೊಂಡಿಲ್ಲ ಎನ್ನುವುದು ನಿಜವಲ್ಲ. ಶಿವಮೊಗ್ಗ ಜಿಲ್ಲೆಯಲ್ಲಿ ಅರಣ್ಯ ಉತ್ಪತ್ತಿಯ ಅಕ್ರಮ ಸಾಗಾಣಿಕೆಗೆ ಅವಕಾಶ ಮಾಡಿಕೊಡುವ ಮೂಲಕ ಈ ಪ್ರಕರಣದಲ್ಲಿ ಸಾಗುವಾನಿ ನಾಟಾವನ್ನು ಸಾಗಾಣಿಕೆ ಮಾಡಲು ಅನುವು ಮಾಡಿಕೊಟ್ಟಿದ್ದೇವೆ ಎನ್ನುವುದು ಸರಿಯಲ್ಲವೆಂದು ಹೇಳಿಕೆ ನೀಡಿರುತ್ತಾರೆ.

ಮೇಲ್ಕಂಡ ಅರ್ಜಿದಾರರು ನ್ಯಾಯಾಲಯದಲ್ಲಿ ನೀಡಿದ ಹೇಳಿಕೆಗಳು ಮತ್ತು ಅರ್ಜಿದಾರರು ನ್ಯಾಯಾಲಯಕ್ಕೆ ನೀಡಿದ ದಾಖಲಾತಿಗಳನ್ನು ಪರಿಶೀಲಿಸಿದಾಗ ಈ ಕೆಳಕಂಡ ಅಂಶಗಳು ಕಂಡುಬಂದಿರುತ್ತವೆ.

1. ವಾಹನದ ಮಾಲೀಕರೆಂದು ಶ್ರೀ ಬಿ.ಎಸ್. ವೆಂಕಟೇಶ್ ರವರು ದಿನಾಂಕ: 20.3.2001 ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿದ್ದು, ಅರ್ಜಿಯಲ್ಲಿ ತಿಳಿಸಿರುವ ಸಂಗತಿಗಳು ಕಪೋಲ ಕಲ್ಪಿತದಿಂದ ಕೂಡಿದ್ದಾಗಿರುತ್ತದೆ. ಆದರೆ, ಪ್ರಕರಣ ಮಾಲೀಕರಿಗೆ ತಿಳಿದೇ ಈ ಅಕ್ರಮ ಕೃತ್ಯ ನಡೆದಿರುತ್ತದೆ ಎಂದು ಭಾವಿಸಬೇಕಾಗುತ್ತದೆ. ಇಲ್ಲವಾದಲ್ಲಿ ವಾಹನದ ಮಾಲೀಕರು ವಾಹನವನ್ನು ಇಲಾಖೆಯವರು ದಿನಾಂಕ: 16.2.2001 ರಂದು ಅಮಾನತ್ತುಪಡಿಸಿಕೊಂಡಿದ್ದು, ಮಾಲೀಕರು ತಕ್ಷಣವೇ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸದೇ ಅಥವಾ ಪೊಲೀಸ್ ಠಾಣೆಗೆ ದೂರು ಕೊಡದೇ ತಪ್ಪು ಮಾಡಿರುವುದು ಕಂಡು ಬಂದಿರುತ್ತದೆ. ತಡವಾದುದಕ್ಕೆ ಸಮಂಜಸ ಕಾರಣಗಳನ್ನು, ಪುರಾವೆಗಳನ್ನು ದಿನಾಂಕ: 20.3.2001 ರಂದು ಈ ಪ್ರಾಧಿಕಾರಕ್ಕೆ ಸಲ್ಲಿಸಿದ ಅರ್ಜಿಯಲ್ಲಿಯೂ ಹಾಗೂ ಈ ನ್ಯಾಯಾಲಯದಲ್ಲಿಯೂ ತಿಳಿಸಿರುವುದಿಲ್ಲ.
2. ವಾಹನ ಮಾಲೀಕರು ಅವರ ಹೇಳಿಕೆಯಲ್ಲಿ ಶ್ರೀ ಸುಭಾನ್ ಎನ್ನುವವನು ಚಾಲಕನಾಗಿ ಲಾರಿಯಲ್ಲಿ ಮನೆಯ ಸಾಮಾನುಗಳನ್ನು ಶಿವಮೊಗ್ಗ ಜಿಲ್ಲೆಯ ಆಯನೂರು ಯಾವುದೋ ಹಳ್ಳಿಗೆ ಸಾಗಾಣಿಕೆ ಮಾಡಲು ತೆಗೆದುಕೊಂಡು ಹೋಗಿದ್ದನು ಎಂಬುದಾಗಿ ತಿಳಿಸಿರುತ್ತಾರೆ. ಮನೆ ಸಾಮಾನು ತಂದ ನಂತರ ತಂದೆಯ ಮನೆಯಾದ ಆಯನೂರಿನ ದಾದಾಪೀರ್ ಮನೆ ಮುಂದೆ ಇಟ್ಟಾಗ ಪೊಲೀಸ್‌ರವರು ತೆಗೆದುಕೊಂಡು ಹೋಗಿರುತ್ತಾರೆಂದು ತಿಳಿಸಿರುತ್ತಾರೆ. ಆದರೆ ಇದು ಕಟ್ಟುಕತೆ. ಕಾರಣ, ಹಳೆಮನೆಯ ಸಾಮಾನುಗಳನ್ನು ಶಿವಮೊಗ್ಗ ಹತ್ತಿರದ ಹಳ್ಳಿಗೆ ಸಾಗಿಸಿದ್ದೇ ನಿಜವಾಗಿದ್ದರೆ ಅರ್ಜಿದಾರರು ಮನೆ ಸಾಮಾನುಗಳನ್ನು ಸಾಗಿಸಿದವರ ಹೆಸರು ಪೂರ್ಣ ವಿಳಾಸ ನ್ಯಾಯಾಲಯಕ್ಕೆ ತಿಳಿಸಬಹುದಾಗಿತ್ತು. ಅಲ್ಲದೇ ಆ ಪಾರ್ಟಿಯನ್ನು ನ್ಯಾಯಾಲಯಕ್ಕೆ ಕರೆಸಿ ವಿಚಾರಣೆಗೆ ಒಳಪಡಿಸಬೇಕಿತ್ತು. ಹಾಗೆ ಮಾಡಿದರೆ ಅವರ ಹೇಳಿಕೆಯಲ್ಲಿ ತಿಳಿಸಿದ ಸಂಗತಿಗಳೇ ಹೆಚ್ಚಿನ ಮಹತ್ವ ಕೂಡಿ, ಅಕ್ರಮ ಕೃತ್ಯಕ್ಕೆ ಭಾಗಿಯಾಗಿಲ್ಲವೆಂದು ನಿರೂಪಿಸಬಹುದಾಗಿತ್ತು. ಹಾಗೆ ಮಾಡದೇ ಇರುವುದರಿಂದ ಅರ್ಜಿದಾರರು/ ಮಾಲೀಕರು ಅವರ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆ ಎಂಬುದಕ್ಕೆ ಯಾವುದೇ ಸಾಕ್ಷಿದಾರರನ್ನು ಹಾಜರುಪಡಿಸಿರುವುದಿಲ್ಲ. ಅಲ್ಲದೇ ನ್ಯಾಯಾಲಯದಲ್ಲಿ ಸಾಕ್ಷಿ ನುಡಿಯುವಾಗಲೂ ಈ ಬಗ್ಗೆ ದಾಖಲಾತಿಯಿಂದ ಸ್ಪಷ್ಟಪಡಿಸಿರುವುದಿಲ್ಲ.
3. ಕಡೇ ಪಕ್ಷ ವಾಹನ ಚಾಲಕನನ್ನಾದರೂ ನ್ಯಾಯಾಲಯಕ್ಕೆ ಹಾಜರುಪಡಿಸಿ ಸತ್ಯಾಂಶವನ್ನು ನಿರೂಪಿಸಬೇಕಿತ್ತು. ಹೀಗೆ ಮಾಡದೇ ಇರುವುದು ಪ್ರಮುಖ ಲೋಪವೆಂದು ಕಂಡುಬರುತ್ತದೆ.
4. ಮಾಲೀಕರು ಈ ಅಕ್ರಮ ಕೃತ್ಯದಲ್ಲಿ ಭಾಗಿಯಾಗಿಲ್ಲದಿದ್ದರೆ, ನಿಜವಾಗಿ ಚಾಲಕನೇ ಮಾಡಿದ್ದರೆ ಚಾಲಕನ ಮೇಲೆ ಪೊಲೀಸ್ ಠಾಣೆಯಲ್ಲಿ ದೂರು ನೀಡಬಹುದಾಗಿತ್ತು. ದೂರು ನಿಡಿದ ಬಗ್ಗೆ ಯವುದೇ ಸಾಕ್ಷ್ಯಾಧಾರ ನ್ಯಾಯಾಲಯಕ್ಕೆ ಹಾಜರುಪಡಿಸದೇ ಇದ್ದರಿಂದ ದೂರು ನೀಡಿಲ್ಲವೆಂದು ಸಾಬೀತಾಗುತ್ತದೆ. ಇದರಿಂದ ಅವರ ಹೇಳಿಕೆಗೆ ಪುಷ್ಟಿ ಬರುವುದಿಲ್ಲ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ವಾಹನದ ಮಾಲೀಕರು ತಿಳುವಳಿಕೆ ಮತ್ತು ಶಾಮೀಲಾಗಿಲ್ಲದೇ ಅಪರಾಧವಾಗಿದೆ ಎಂಬುದನ್ನು ಅರ್ಜಿದಾರರು ರುಜುವಾತುಪಡಿಸಿರುವುದಿಲ್ಲ. ವಾಹನ ಮಾಲೀಕರು ಅಗತ್ಯವಾದ ಮತ್ತು ಸಾಧ್ಯವಾಗಬಹುದಾದ ಎಲ್ಲಾ ರೀತಿಯ ಮುಂಜಾಗ್ರತಾ ಕ್ರಮ ತೆಗೆದುಕೊಂಡಿದರೆ ಈ ಕೃತ್ಯ ನಡೆಯುತ್ತಿರಲಿಲ್ಲ. ಅರ್ಜಿದಾರರು ದಿನಾಂಕ: 23.2.2001 ರಂದು ನೀಡಿದ ಅರ್ಜಿಯಲ್ಲಿ ಹಾಗೂ ದಿನಾಂಕ: 20.11.2004 ರಂದು ನ್ಯಾಯಾಲಯದಲ್ಲಿ ನೀಡಿದ ಹೇಳಿಕೆಗಳು ಒಂದು ಕಟ್ಟುಕತೆಯಾಗಿದ್ದು ನಂಬಲು ಅಸಾಧ್ಯವಾಗಿರುತ್ತದೆ. ಅರ್ಜಿದಾರರ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಾಣಿಕೆಗೆ ಬಳಕೆಯಾಗದಂತೆ ವಾಹನ ಮಾಲೀಕರು ಅಥವಾ ಅವರ ಏಜೆಂಟರು ಯಾವುದೇ ಮುನ್ನೆಚ್ಚರಿಕೆ ವಹಿಸಿದ ಬಗ್ಗೆ ಸಮರ್ಪಕವಾದ ಸಾಕ್ಷಿಗಳನ್ನು ನೀಡಿರುವುದಿಲ್ಲ. ಕರ್ನಾಟಕ ಅರಣ್ಯ ಕಾಯಿದೆ ಸೆಕ್ಷನ್ 71(ಬಿ) ಪ್ರಕಾರ ವಾಹನದಲ್ಲಿ ತನ್ನ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆ ಎಂಬುದನ್ನು ಸಾಬೀತುಪಡಿಸುವ ಜವಾಬ್ದಾರಿ ಮಾಲೀಕನ ಮೇಲಿದ್ದರಿಂದ ಇದನ್ನು ರುಜುವಾತುಪಡಿಸುವಲ್ಲಿ ವಿಫಲರಾಗಿರುತ್ತಾರೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕುಶವಾಗಿ ಪರಿಶೀಲಿಸಿ ನೋಡಿದಾಗ, ಅರ್ಜಿದಾರರ ತಿಳುವಳಿಕೆಯಲ್ಲಿಯೇ ಈ ಕೃತ್ಯ ನಡೆದಿದೆ ಹಾಗೂ ಅರ್ಜಿದಾರರು ಅಥವಾ ಅವರ ಏಜೆಂಟರು ಮೇಲ್ಕಂಡ ಅರಣ್ಯ ಉತ್ಪನ್ನ ಸಾಗಾಣಿಕೆಯಲ್ಲಿ ಭಾಗವಹಿಸಿರುತ್ತಾರೆ ಎಂಬುದು ನಿಸ್ಸಂಶಯವಾಗಿ ಸಾಬೀತಾಗುತ್ತದೆ. ಹಾಗೂ ಈ ವಾಹನವನ್ನು ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನ ಮಾಲೀಕರು ಅಥವಾ ಪ್ರತಿನಿಧಿಗಳು ಅಥವಾ ಚಾಲಕರು ಮುಂಜಾಗ್ರತಾ ಕ್ರಮ ತೆಗೆದುಕೊಂಡಿರುವುದಿಲ್ಲ. ಇದರಿಂದ ಲಾರಿಯಲ್ಲಿ ಸಾಗುವಾನಿ ತುಂಡುಗಳ ಅಕ್ರಮ ಸಾಗಾಣಿಕೆಯು ವಾಹನ ಮಾಲೀಕರಿಗೆ ಗೊತ್ತಿದ್ದೇ ಈ ಕೃತ್ಯ ನಡೆದಿದೆ ಎಂಬುದಾಗಿ ನಿಸ್ಸಂಶಯವಾಗಿ ಅಭಿಪ್ರಾಯಪಡುತ್ತೇನೆ.

ಈ ಎಲ್ಲಾ ಕಾರಣಗಳಿಂದ ಅಂಶ 3 ನ್ನು ನಕಾರಾತ್ಮಕವಾಗಿ ಪರಿಗಣಿಸುತ್ತೇನೆ.

## ಅಂತಿಮ ಆದೇಶ

ಈ ಮೇಲ್ಕಂಡ ಪ್ರಕರಣಕ್ಕೆ ಸಂಬಂಧಿಸಿದಂತೆ ಎಲ್ಲಾ ಅಗತ್ಯ ದಾಖಲಾತಿಗಳನ್ನು ಪರಿಶೀಲಿಸಿ, ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ.ಎ.ಎನ್. ಕರ್ಕೀಕರ್, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು, 1963ರ ಕರ್ನಾಟಕ ಅರಣ್ಯ ಅಧಿನಿಯಮ 71ಎ ಪ್ರಕಾರ, ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ವಾಹನ ಲಾರಿ ನೋಂದಣಿ ಸಂಖ್ಯೆ: ಎಮ್.ವೈ.ಹೆಚ್-6315 ಎಂದು, ಇಂಜೀನ್ ಸಂಖ್ಯೆ: 38-A95-3121881102JFS2 ಮತ್ತು ಛಾಸ್ಸಿ ಸಂಖ್ಯೆ 3444073793835 ಮತ್ತು 3=0.153 ಘ.ಮೀ. ಸಾಗುವಾನಿ ತುಂಡುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಸದರಿ ವಾಹನವು ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ.

ಈ ಆದೇಶವು ಈ ದಿನಾಂಕ: 4.6.2005 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಸದರಿ ಆದೇಶವನ್ನು ಹೊರಡಿಸಿದ 30 ದಿನಗಳ ಒಳಗೆ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸದೇ ಇದ್ದರೆ, ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಈ ಆದೇಶವು ದಿನಾಂಕ: 4.6.2005 ರಂದು ಬೆರಳಚ್ಚಿಸಿ ತೆರೆದ ನ್ಯಾಯಾಲಯದಲ್ಲಿ ಉದ್ಘೋಷಿಸಿ, ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಜಿ.ಎ.ಎನ್. ಕರ್ಕೀಕರ್**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

**ವಿಚಾರಣೆ ಮಾಡಲ್ಪಟ್ಟ ಸಾಕ್ಷಿಗಳು:**

1. **ಅಭಿಯೋಜನಾ ಪರ ಸಾಕ್ಷಿ:**
   ಅ) ಶ್ರೀ ಡಿ.ಸಿ. ಉಮಾಪತಿ, ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ಟ್ರಾಫಿಕ್, ಶಿವಮೊಗ್ಗ - ಪಿಡಬ್ಲ್ಯೂ-1
   ಇ) ಶ್ರೀ ಜಿ.ಎಸ್. ಇಗ್ನೇಶಿಯಸ್ ಬಾಬು, ವನಪಾಲಕ, ಅರಣ್ಯ ಸಂಚಾರಿದಳ, ಶಿವಮೊಗ್ಗ - ಪಿಡಬ್ಲ್ಯೂ-2
2. **ಅರ್ಜಿದಾರರ ಪರ ಸಾಕ್ಷಿಗಳು:**
   ಅ) ಶ್ರೀ ಬಿ.ಎಸ್. ವೆಂಕಟೇಶ ಬಿನ್ ಸೆಡಿಯಪ್ಪ, ಬೆಂಗಳೂರು - ಡಿಡಬ್ಲ್ಯೂ-1
3. **ನಿಶಾನಿಸಲ್ಪಟ್ಟ ದಾಖಲೆಗಳು:**
   1. ಶ್ರೀ ಬಿ. ಹುಚ್ಚಪ್ಪ, ಅರಣ್ಯ ವೀಕ್ಷಕ, ಹಣಗೆರೆ ವನ್ಯಜೀವಿ ವಲಯ ಇವರು ಕುಂಸಿ ಪೊಲೀಸ್ ಠಾಣೆಗೆ ನಿಡಿದ ದೂರು - ನಿಶಾನೆ ಪಿ1
   2. ಕುಂಸಿ ಪೊಲೀಸ್ ಠಾಣೆಯ ಪ್ರಥಮ ಮಾಹಿತಿ ವರದಿ - ನಿಶಾನೆ ಪಿ2
   3. ಸಿರಿಗೆರೆ ಅರಣ್ಯ ತನಿಖಾ ಠಾಣೆಯ ಬಳಿ ಪಂಚರ ಸಮಕ್ಷಮ ನಡೆದ ಮಹಜರ್ - ನಿಶಾನೆ ಪಿ3
   4. ಕುಂಸಿ ಪೊಲೀಸ್ ಠಾಣೆಯ ಅಮಾನತ್ ಪಂಚನಾಮ - ನಿಶಾನೆ ಪಿ4
   5. ಕುಂಸಿ ಪೊಲೀಸ್ ಠಾಣೆಯ ಅಮಾನತ್ ಪಂಚನಾಮ - ನಿಶಾನೆ ಪಿ5
   6. ಕುಂಸಿ ಪೊಲೀಸ್ ಠಾಣೆಯ ಸ್ಥಳ ಪಂಚನಾಮ - ನಿಶಾನೆ ಪಿ6
   7. ಹಣಗೆರೆ ವನ್ಯಜೀವಿ ವಲಯದವರ ಮಹಜರ್ - ನಿಶಾನೆ ಪಿ7
   8. ಕುಂಸಿ ಪೊಲೀಸ್ ಠಾಣೆಯ ಪ್ರಥಮ ಮಾಹಿತಿ ವರದಿ - ನಿಶಾನೆ ಪಿ8
   9. ಹಣಗೆರೆ ವನ್ಯಜೀವಿ ವಲಯದವರ ಪ್ರಥಮ ಮಾಹಿತಿ ವರದಿ - ನಿಶಾನೆ ಪಿ9
4. **ಮುದ್ದೆ ಮಾಲುಗಳು:**
   1. 1 ರಿಂದ 3 ಸಾಗುವಾನಿ ತುಂಡುಗಳು
   2. ಲಾರಿ ನೋಂದಣಿ ಸಂಖ್ಯೆ ಎಂವೈಎಸ್-6315
5. **ಅರ್ಜಿದಾರರ ಪರ ಗುರುತಿಸಲ್ಪಟ್ಟ ದಾಖಲೆಗಳು:**
   -ಇಲ್ಲ-

**ಜಿ.ಎ.ಎನ್. ಕರ್ಕೀಕರ್**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

ಪಿ.ಆರ್. 939

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರವರ ನಡವಳಿಗಳು, ಬೆಂಗಳೂರು

**ವಿಷಯ:** ಶ್ರೀಮತಿ ಜಯಶ್ರೀ, ಕಿರಿಯ ಆರೋಗ್ಯ ಸಹಾಯಕಿ, ಪ್ರಾಥಮಿಕ ಆರೋಗ್ಯ ಕೇಂದ್ರ ವಿಟ್ಲ, ಇವರ ಅನಧಿಕೃತ ಗೈರುಹಾಜರಿ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂಖ್ಯೆ: ಡಿಪಿಎನ್(8) ಸಿಆರ್ 68-96-97, ದಿ: 6.5.97.
2) ನೌಕರರ ಲಿಖಿತ ಅಹವಾಲು ಪತ್ರ ದಿನಾಂಕ ಇಲ್ಲ.
3) ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ: ಡಿಪಿಎನ್:(8)ಸಿಆರ್:68:96-97.
4) ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂಖ್ಯೆ: ಡಿಪಿಎನ್(8) ಸಿಆರ್ 68:96-97, ದಿ: 19.11.04.
5) ವಿಜಯ ಕರ್ನಾಟಕ ದಿನಪತ್ರಿಕೆಯ ದಿನಾಂಕ: 8.4.04 ರಲ್ಲಿ ಪತ್ರಿಕಾ ಪ್ರಕಟಣೆ ನೀಡಿರುವ ಬಗ್ಗೆ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ಇವರ ಪತ್ರ ಸಂಖ್ಯೆ: ಸಿ(1) ಕಿಮಅಸ: 262:99-2000, ದಿ: 10.3.05.

**ಪ್ರಸ್ತಾವನೆ:**

ಶ್ರೀಮತಿ ಜಯಶ್ರೀ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಇವರು ಹಿಂದೆ, ಪ್ರಾಥಮಿಕ ಆರೋಗ್ಯ ಕೇಂದ್ರ ಪೇಟ ಅಮ್ಮಾಪುರ ಗುಲ್ಬರ್ಗಾ ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ: 3.10.1991 ರಿಂದ 1.8.94 ರವರೆಗೆ ಅನಧಿಕೃತ ಗೈರುಹಾಜರಿಯಾದ ಆರೋಪದ ಬಗ್ಗೆ ಮೇಲೆ

ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಇದಕ್ಕೆ ಅನುಗುಣವಾಗಿ ನೌಕರರು ಮೇಲೆ ಓದಲಾದ (2) ರಲ್ಲಿನ ಪತ್ರದಲ್ಲಿ ಸಲ್ಲಿಸಿದ ಲಿಖಿತ ಅಹವಾಲನ್ನು ಪರಿಶೀಲಿಸಿ, ಅದು ಸಮರ್ಪಕವಾಗಿರದ ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (3) ರಲ್ಲಿನ ಆದೇಶದಲ್ಲಿ ಮುಖ್ಯ ಜಾಗ್ರತಾಧಿಕಾರಿಗಳು ಜಾಗ್ರತಕೋಶ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದು, ಮೇಲೆ ಓದಲಾದ (4) ರಂತೆ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿರುತ್ತಾರೆ. ಮೇಲೆ ಓದಲಾದ (5) ರಲ್ಲಿನ ಸೂಚನಾಪತ್ರದಲ್ಲಿ ವಿಚಾರಣಾ ವರದಿಯ ಪ್ರತಿಯನ್ನು ನೌಕರರಿಗೆ ಜಾರಿಗೊಳಿಸಿದ್ದಕ್ಕನುಗುಣವಾಗಿ ಮೇಲೆ ಓದಲಾದ (6) ರಲ್ಲಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸದೆ ದಿನಾಂಕ: 8.4.2004 ರಂದು ಪತ್ರಿಕಾ ಪ್ರಕಟಣೆ ನೀಡಲಾಗಿದ್ದರೂ, ಈ ವರೆವಿಗೂ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುತ್ತಾರೆ.

ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು, ದ.ಕ. ಮಂಗಳೂರು, ಇವರ ದಿನಾಂಕ: 16.3.2005 ರ ಪತ್ರದಲ್ಲಿನ ವರದಿಯಂತೆ ಸದರಿ ನೌಕರರು ಪ್ರಾಥಮಿಕ ಆರೋಗ್ಯ ಕೇಂದ್ರ ವಿಟ್ಲ ದಕ್ಷಿಣ ಕನ್ನಡ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ: 17.8.99 ರಿಂದ ಈವರೆಗೆ ಅನಧಿಕೃತ ಗೈರುಹಾಜರಾಗಿರುವುದಾಗಿ ತಿಳಿದುಬಂದಿರುತ್ತದೆ.

ವಿಚಾರಣಾಧಿಕಾರಿಗಳು, ನೀಡಿರುವ ವಿಚಾರಣಾ ವರದಿಯಲ್ಲಿನ ನಿರ್ಣಯವನ್ನು ಪರಿಶೀಲಿಸಿದ ತರುವಾಯ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್:8:ಸಿಆರ್ 68-96-97, ಬೆಂಗಳೂರು**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮೊಹಮ್ಮದ್ ಸನಾವುಲ್ಲ, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಆದ ನಾನು ಶ್ರೀಮತಿ ಜಯಶ್ರೀ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಪ್ರಾ.ಆ. ಕೇಂದ್ರ, ವಿಟ್ಲ, ಇವರು ಪ್ರಾ.ಆ. ಕೇಂದ್ರ ಪೇಟ, ಅಮ್ಮಾಪುರ, ಗುಲ್ಬರ್ಗಾ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ: 3.10.1991 ರಿಂದ 1.8.1994 ರವರೆಗೆ ಹಾಗೂ ಪ್ರಾ.ಆ. ಕೇಂದ್ರ ವಿಟ್ಲ ದ.ಕ. ಜಿಲ್ಲೆ, ಇಲ್ಲಿ ದಿನಾಂಕ: 2.8.94 ರಿಂದ ಕರ್ತವ್ಯನಿರ್ವಹಿಸಿ ಮತ್ತೆ ದಿನಾಂಕ: 17.8.99 ರಿಂದ ಇಲ್ಲಿಯವರೆವಿಗೂ ಅನಧಿಕೃತ ಗೈರುಹಾಜರಿಯಾದ ಬಗ್ಗೆ ದಂಡನೆಯಾಗಿ ಕೆ.ಸಿ.ಎಸ್. (ಸಿಸಿಎ) ನಿಯಮ 8(viii)ರ ಪ್ರಕಾರ ಈ ಕೂಡಲೇ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿದ್ದೇನೆ.

**ಮೊಹಮ್ಮದ್ ಸನಾವುಲ್ಲ**
ಆಯುಕ್ತರು
ಆರೋಗ್ಯ ಮತ್ತು ಕು.ಕ. ಸೇವೆಗಳು.

ಪಿ.ಆರ್.941

**ಜಿಲ್ಲಾ ಅಧಿಕಾರಿಗಳವರ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಶಿವಮೊಗ್ಗ**

**ಪತ್ರಿಕಾ ಪ್ರಕಟಣೆ**

**ಸಂ: ಬಿಸಿಎಂ:6:ಕಾ.ತ:ಸಿಆರ್-14:05-06, ದಿನಾಂಕ: 4ನೇ ಜೂನ್ 2005**

**ವಿಷಯ:** 2005-06ನೇ ಸಾಲಿಗೆ ಮತೀಯ ಅಲ್ಪಸಂಖ್ಯಾತರ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಂದ ತರಬೇತಿಗಾಗಿ ಅರ್ಜಿಯನ್ನು ಆಹ್ವಾನಿಸುವ ಬಗ್ಗೆ.

**ಉಲ್ಲೇಖ:**
1) ಸರ್ಕಾರಿ ಆದೇಶ ಸಂಖ್ಯೆ: ಸಕಇ.149/ಬಿಇಟಿ.99, ದಿ: 2.9.99.
2) ಸಕಇ.205/ಬಿಎಂಎಸ್.99, ದಿನಾಂಕ: 9.10.1999.
3) ಎಸ್‌ಡಬ್ಲ್ಯುಎಲ್.60/ಎಸ್‌ಎಡಬ್ಲ್ಯು.12, ದಿ: 2.11.99.

ಶಿವಮೊಗ್ಗ ಜಿಲ್ಲೆಯಲ್ಲಿರುವ ಮತೀಯ ಅಲ್ಪಸಂಖ್ಯಾತರ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಂದ 2005-06ನೇ ಸಾಲಿನಿಂದ 4 ವರ್ಷಗಳ ಅವಧಿಯವರೆಗೆ ಈ ಇಲಾಖಾ ವತಿಯಿಂದ ತರಬೇತಿಯನ್ನು ನೀಡಲು ಅರ್ಜಿಯನ್ನು ಆಹ್ವಾನಿಸಲಾಗಿದೆ. ತರಬೇತಿಗಾಗಿ ಅರ್ಜಿಯನ್ನು ಸಲ್ಲಿಸುವ ಅಭ್ಯರ್ಥಿಗಳು ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟಿರಬೇಕು.

**ನಿಬಂಧನೆಗಳು:-**

1. ಅಭ್ಯರ್ಥಿಗಳು ಮತೀಯ ಅಲ್ಪಸಂಖ್ಯಾತರರಾಗಿರಬೇಕು (ಮುಸ್ಲಿಂ, ಜೈನ್, ಕ್ರಿಶ್ಚಿಯನ್, ಸಿಖ್, ಬೌದ್ಧ, ಪಾರ್ಸಿ ಮತ್ತು ಆಂಗ್ಲೋ ಇಂಡಿಯನ್)
2. ಅರ್ಜಿಯನ್ನು ಸ್ವೀಕರಿಸುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು ಅಡ್ವೊಕೇಟ್ ಆಗಿ ಕಾರ್ಯನಿರ್ವಹಿಸಲು ನಿಗದಿಪಡಿಸಲಾದ ಕಾನೂನು ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಎರಡು ವರ್ಷ ಅವಧಿಯೊಳಗೆ ಇರುವವರು ಮಾತ್ರ ಅರ್ಜಿಯನ್ನು ಸಲ್ಲಿಸಬಹುದು.
3. ಕಾನೂನು ತರಬೇತಿಯು 4 ವರ್ಷಗಳ ಅವಧಿಯಾಗಿದ್ದು ಮಾಸಿಕ ರೂ. 1000/- ಗಳನ್ನು ಶಿಷ್ಯವೇತನ ನೀಡಲಾಗುವುದು.
4. ಅಭ್ಯರ್ಥಿಯ ಗರಿಷ್ಠ ವಯೋಮಿತಿ 30 ವರ್ಷದೊಳಗಿರಬೇಕು.
5. ತರಬೇತಿಯ ಅವಧಿಯ ಮಧ್ಯಭಾಗದಲ್ಲಿ ತರಬೇತಿಗೆ ಗೈರುಹಾಜರಾದಲ್ಲಿ ಪಡೆಯಲಾಗಿರುವ ಶಿಷ್ಯವೇತನ ಹಣವನ್ನು ಬಡ್ಡಿಯೊಂದಿಗೆ ಹಿಂದಿರುಗಿಸಬೇಕಾಗುವುದು.
6. ಅರ್ಜಿಯನ್ನು ಸ್ವೀಕರಿಸುವ ಕೊನೆಯ ದಿನಾಂಕ: 30.6.2005.
7. ಅಪೂರ್ಣವಾದ ಹಾಗೂ ಕೊನೆಯ ದಿನಾಂಕದ ನಂತರ ಬಂದ ಅರ್ಜಿಯನ್ನು ಯಾವುದೇ ಮುನ್ಸೂಚನೆಯಿಲ್ಲದೇ ತಿರಸ್ಕರಿಸಲಾಗುವುದು.
8. ಅಭ್ಯರ್ಥಿಯ ಕುಟುಂಬದ ವಾರ್ಷಿಕ ಆದಾಯ ರೂ. 15,000/- ಕ್ಕೆ ಮೀರಿರಬಾರದು ಪ್ರವರ್ಗ-1 ರಡಿಯಲ್ಲಿ ಬರುವ ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಆದಾಯ ಮಿತಿ ಇರುವುದಿಲ್ಲ.
9. ಅಭ್ಯರ್ಥಿಯು ತಮ್ಮ ಹೆಸರನ್ನು ಬಾರ್ ಕೌನ್ಸಿಲ್‌ನಲ್ಲಿ ನೋಂದಾಯಿಸಿರಬೇಕು.
10. ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಸಮಿತಿಯ ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್ ಸರ್ಕಾರಿ ವಕೀಲರು ಅಥವಾ ಕನಿಷ್ಠ 20 ವರ್ಷಗಳ ವೃತ್ತಿಯಲ್ಲಿ ಅನುಭವ ವಕೀಲರ ಅಧೀನದಲ್ಲಿ ತರಬೇತಿ ಪಡೆಯುವುದು.
11. ಆಯ್ಕೆಯು ಅನುದಾನ ಲಭ್ಯತೆ ಮೇಲೆ ಅವಲಂಬಿಸಿರುವುದರಿಂದ ಷರತ್ತಿಗೊಳಪಟ್ಟಿರುತ್ತದೆ.

ಹೆಚ್ಚಿನ ವಿವರಗಳಿಗೆ ಹಾಗೂ ಅರ್ಜಿ ನಮೂನೆಯನ್ನು ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ರವೀಂದ್ರನಗರ, 100 ಅಡಿ ರಸ್ತೆ, ಶಿವಮೊಗ್ಗ ಜಿಲ್ಲಾ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ.

**ಜಿಲ್ಲಾಧಿಕಾರಿಗಳು,**

ಪಿ.ಆರ್.942 ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಶಿವಮೊಗ್ಗ.

**ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯ**

**ವಿಷಯ:** ಸಮಾಪನೆಗೊಂಡಿರುವ ಅಲ್ಪತಾ ಮೈನಾರಿಟೀಸ್ ಮೋಟಾರ್ ವೆಹಿಕಲ್ಸ್ ಅಂಡ್ ಆಟೋ ಅಂಡ್ ಇಂಜಿನೀಯರಿಂಗ್ ವರ್ಕ್ಸ್ ಕೋ ಆಪ್ ಸೊಸೈಟಿ ಲಿ., ದಾವಣಗೆರೆ, ದಾವಣಗೆರೆ ತಾಲ್ಲೂಕು ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:**
1) ಈ ಕಛೇರಿ ಆದೇಶ ಸಂಖ್ಯೆ: ಡಿಆರ್:ಡಿವಿಜಿ:ಎಲ್‌ಕ್ಯೂಡಿ:ಸಿಆರ್:23:2003-04, ದಿನಾಂಕ: 24.1.2004.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪ ವಿಭಾಗ, ದಾವಣಗೆರೆ ಇವರ ಪತ್ರ ದಿನಾಂಕ: 16.6.2005.

**ಪ್ರಸ್ತಾವನೆ:-**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ಸಂಖ್ಯೆ: ಎಆರ್-31:ಆರ್‌ಜಿಎನ್: 26085:98-99, ದಿನಾಂಕ: 17.3.1999 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ, ಸಹಕಾರ ಸಂಘಗಳ ನಿರೀಕ್ಷಕರು, 1ನೇ ವೃತ್ತ, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇ ಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ಮೂಲಕ ಉಲ್ಲೇಖ (2)ರ ರೀತ್ಯಾ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರೂ ಸಹ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್:ಡಿವಿಜಿ:ಎಲ್‌ಕ್ಯೂಡಿ:ಸಿಆರ್-23:2003-04, ದಿನಾಂಕ: 25ನೇ ಜೂನ್ 2005**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎ:2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ದಾವಣಗೆರೆ ಜಿಲ್ಲೆಯ ಸಹಕಾರ ಸಂಘಗಳ ಉಪನಿಬಂಧಕರು ಕೆ.ಎಂ. ಆಶಾ, ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಅಲ್ಪತಾ ಮೈನಾರಿಟೀಸ್ ಮೋಟಾರ್ ವೆಹಿಕಲ್ಸ್ ಅಂಡ್ ಆಟೋ ಇಂಜಿನೀಯರಿಂಗ್ ವರ್ಕ್ಸ್ ಕೋ ಆಪ್ ಸೊಸೈಟಿ ಲಿ., ದಾವಣಗೆರೆ, ದಾವಣಗೆರೆ ತಾಲ್ಲೂಕು ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತುಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು. ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಹಸ್ತ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ದಿನಾಂಕ: 25.6.2005 ರಂದು ಈ ಆದೇಶವನ್ನು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಉಪನಿಬಂಧಕರು,

ಪಿ.ಆರ್. 943 ದಾವಣಗೆರೆ ಜಿಲ್ಲೆ, ದಾವಣಗೆರೆ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಎಲ್.ಆರ್.ಎಫ್/ಸಿಆರ್: 120/04-05, ದಿನಾಂಕ: 15ನೇ ಜೂನ್ 2005**

**ವಿಷಯ:** ಶ್ರೀ ಗಂಗಾಧರೇಶ್ವರ ಎಜ್ಯುಕೇಷನಲ್ ಟ್ರಸ್ಟ್ ರವರು ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಮಾಚೋಹಳ್ಳಿ ಗ್ರಾಮದ ಸ.ನಂ. 84 ರಲ್ಲಿ 2-10 ಎ/ಗುಂ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಶ್ರೀ ಗಂಗಾಧರೇಶ್ವರ ಎಜ್ಯುಕೇಷನಲ್ ಟ್ರಸ್ಟ್ ರವರು ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಮಾಚೋಹಳ್ಳಿ ಗ್ರಾಮದ ಸ.ನಂ. 84 ರಲ್ಲಿ 2-10 ಎಕರೆ:ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15 ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪ ವಿಭಾಗಾಧಿಕಾರಿಗಳು ಬೆಂಗಳೂರು ಉತ್ತರ ಉಪ ವಿಭಾಗ ರವರ ಪತ್ರ ಸಂಖ್ಯೆ: ಎಲ್.ಆರ್.ಎಫ್:(1)ಸಿಆರ್:140/04-05 ದಿನಾಂಕ: 12.5.2005 ರಲ್ಲಿ ಪ್ರಸ್ತಾವಿತ ಗ್ರಾಮದ ಸ.ನಂ. 84 ರಲ್ಲಿ 2-10 ಎಕರೆ:ಗುಂಟೆ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(I)(II)ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪ ನೋಂದಣಾಧಿಕಾರಿಗಳ ಕಛೇರಿ ಬೆಂಗಳೂರು ಉತ್ತರ ತಾಲ್ಲೂಕು ಉಪ ನೋಂದಣಾ ಕಛೇರಿಯಲ್ಲಿ ದಿನಾಂಕ: 27.7.1992 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾವಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 04 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(I)(II) ಮತ್ತು ಮತ್ತು ಕನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಮಾಚೋಹಳ್ಳಿ ಗ್ರಾಮದ ಸ.ನಂ. 84 ರಲ್ಲಿ 2-10 ಎಕರೆ:ಗುಂಟೆ ಜಮೀನನ್ನು ಶ್ರೀ ಗಂಗಾಧರೇಶ್ವರ ಎಜ್ಯುಕೇಷನಲ್ ಟ್ರಸ್ಟ್, ಸುಂಕದಕಟ್ಟೆ, ಮಾಗಡಿ ಮುಖ್ಯ ರಸ್ತೆ ಬೆಂಗಳೂರು-560 091 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I)(II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ವ್ಯಶಾಇ 47 ಶಾಸನ 2001 ಬೆಂಗಳೂರು ದಿ: 23.4.03 ರಂತೆ ಶೈಕ್ಷಣಿಕ ಉದ್ದೇಶಕ್ಕೆ 02 ಯೂನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಗೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್ ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ, ಶೇ. 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು ಉದ್ದೇಶಿತ ಯೋಜನೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 944 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಎಲ್.ಆರ್.ಎಫ್/ಸಿಆರ್: 01/05-06, ದಿನಾಂಕ: 24ನೇ ಜೂನ್ 2005**

**ವಿಷಯ:** ಶುಭೋದಯ ಪ್ರತಿಷ್ಠಾನ ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ತಿರುಮೇನಹಳ್ಳಿ ಗ್ರಾಮದ ಸ.ನಂ. 74 ರಲ್ಲಿ 0-06, 75 ರಲ್ಲಿ 0-11, 82 ರಲ್ಲಿ 0-01$^1/_2$ ಹಾಗೂ 83 ರಲ್ಲಿ 0-01$^1/_2$ ಒಟ್ಟು 0-20 ಎ/ಗುಂ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಶುಭೋದಯ ಪ್ರತಿಷ್ಠಾನ ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ತಿರುಮೇನಹಳ್ಳಿ ಗ್ರಾಮದ ಸ.ನಂ. 74 ರಲ್ಲಿ 0-06, 75 ರಲ್ಲಿ 0-11, 82 ರಲ್ಲಿ 0-01$^1/_2$ ಹಾಗೂ 83 ರಲ್ಲಿ 0-01$^1/_2$ ಒಟ್ಟು 0-20 ಎ/ಗುಂ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15 ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪ ವಿಭಾಗಾಧಿಕಾರಿಗಳು ಬೆಂಗಳೂರು ಉತ್ತರ ಉಪ ವಿಭಾಗ ರವರ ಪತ್ರ ಸಂಖ್ಯೆ: ಎಲ್.ಆರ್.ಎಫ್: (ಬಿ.ಎನ್.ಎ) ಸಿಆರ್: 11/05-06 ದಿನಾಂಕ: 9.6.05 ರಲ್ಲಿ ಪ್ರಸ್ತಾಪಿತ ಗ್ರಾಮದ ಸ.ನಂ. 74 ರಲ್ಲಿ 0-06, 75 ರಲ್ಲಿ 0-11, 82 ರಲ್ಲಿ 0-01$^1/_2$ ಹಾಗೂ 83 ರಲ್ಲಿ 0-01$^1/_2$ ಒಟ್ಟು 0-20 ಎ/ಗುಂ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(I)(II) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಸಂಘ ಸಂಸ್ಥೆಗಳ ನೋಂದಣಾಧಿಕಾರಿಗಳ ಕಛೇರಿ ಬೆಂಗಳೂರು ಇಲ್ಲಿ ದಿನಾಂಕ: 11.12.2003 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 04 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(I)(II) ಮತ್ತು ಮತ್ತು ಕನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಯಲಹಂಕ ಹೋಬಳಿ, ತಿರುಮೇನಹಳ್ಳಿ ಗ್ರಾಮದ ಸ.ನಂ. 74 ರಲ್ಲಿ 0-06, 75 ರಲ್ಲಿ 0-11, 82 ರಲ್ಲಿ 0-01$^1/_2$ ಹಾಗೂ 83 ರಲ್ಲಿ 0-01$^1/_2$ ಒಟ್ಟು 0-20 ಎ/ಗುಂ ಜಮೀನನ್ನು ಶುಭೋದಯ ಪ್ರತಿಷ್ಠಾನ, ನಂ. 500, 2ನೇ ಅಡ್ಡರಸ್ತೆ, 8ನೇ ಮುಖ್ಯ ರಸ್ತೆ, ಸದಾನಂದನಗರ, ಬೆಂಗಳೂರು-38 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಗೆ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I)(II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ವ್ಯಶಾಇ 47 ಶಾಸನ 2001 ಬೆಂಗಳೂರು ದಿ: 23.4.03 ರಂತೆ ಶೈಕ್ಷಣಿಕ ಉದ್ದೇಶಕ್ಕೆ 02 ಯೂನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್ ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ, ಶೇ. 55 ಪೇಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು ಉದ್ದೇಶಿತ ಯೋಜನೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 945 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಂತಿಮ ಅಧಿಸೂಚನೆ**

**ನಂ: ಕೆ.ಎಸ್.ಎ.:ಸಿ.ಆರ್:17/04-05, ದಿನಾಂಕ: 21ನೇ ಫೆಬ್ರವರಿ 2005**

ನಂ. ಕೆ.ಎಸ್.ಎ:ಸಿ.ಆರ್:17/04-05, ದಿನಾಂಕ: 15.2.2005ರ ಪ್ರಿಲಿಮಿನರಿ ಅಧಿಸೂಚನೆಯನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿ ಅದರಲ್ಲಿ ಸದರಿ ಅಧಿಸೂಚನೆಯ ಷೆಡ್ಯೂಲ್‌ನಲ್ಲಿರುವ ಬೆಂಗಳೂರು ನಗರ ಚಾಮುಂಡಿ ನಗರ ಕೊಳಚೆ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಪ್ರಾರಂಭಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ ಸಂಬಂಧಿಸಿದವರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಸದರಿ ಪ್ರಿಲಿಮಿನರಿ ಅಧಿಸೂಚನೆಗೆ ಸಂಬಂಧಿಸಿದಂತೆ ಆಕ್ಷೇಪಣೆಗಳು ಯಾವುದೂ ಬಂದಿರುವುದಿಲ್ಲ. ಈ ಬಗ್ಗೆ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯವರು ವರದಿ ಸಲ್ಲಿಸಿ ಈ ಪ್ರದೇಶದಲ್ಲಿ ಗುಡಿಸಲು ಇರುವುದರಿಂದ ಹಾಗೂ ಈ ಪ್ರದೇಶವು ಕೊಳಚೆ ಗುಣಲಕ್ಷಣಗಳನ್ನು ಹೊಂದಿರುವುದರಿಂದ ಇದನ್ನು ಕೊಳಚೆ ಪ್ರದೇಶವೆಂದು ಅಂತಿಮವಾಗಿ ಘೋಷಿಸುವಂತೆ ತಿಳಿಸಿರುತ್ತಾರೆ.

ಪ್ರಶ್ನಿತ ಕೊಳಚೆ ಪ್ರದೇಶದಲ್ಲಿ ಗುಡಿಸಲು/ಮನೆಗಳು ದುರಸ್ಥಿ ಇಲ್ಲದೇ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಅನಾರೋಗ್ಯದ ವಾತಾವರಣ ಉಂಟಾಗಿರುತ್ತದೆ. ಸದರಿ ಪ್ರದೇಶವನ್ನು ಅಭಿವೃದ್ಧಿಪಡಿಸುವುದು ಅತ್ಯಗತ್ಯವಾಗಿರುತ್ತದೆ. ಆದ್ದರಿಂದ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ದತ್ತವಾಗಿರುವ ಅಧಿಕಾರದಂತೆ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಮೇಲ್ಕಂಡ ಕಾಯ್ದೆಯ ಸೆಕ್ಷನ್ 3 ರಡಿಯಲ್ಲಿ ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿರುತ್ತೇನೆ.

**ಷೆಡ್ಯೂಲ್**

ಬೆಂಗಳೂರು ನಗರ ಸಭೆಯ ವ್ಯಾಪ್ತಿಯ, ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ಹೊಸಕೆರೆ ಹಳ್ಳಿ ಚಾಮುಂಡಿನಗರ ಕೊಳಚೆ ಪ್ರದೇಶದ ಸ.ನಂ. 90ರ 0.35 ಗುಂಟೆ ವಿಸ್ತೀರ್ಣದ ಚೆಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸರ್ವೆ ನಂ. | ವಿಸ್ತೀರ್ಣ (ಚ.ಅ) | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಚಾಮುಂಡಿ ನಗರ ಕೊಳಚೆ ಪ್ರದೇಶ | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ | 90 | 0.35 ಗುಂಟೆ | ಖಾಲಿ ಪ್ರದೇಶ ಹಳ್ಳ | ರಸ್ತೆ | ರಸ್ತೆ | ಬಿ.ಡಿ.ಎ. ಪಾರ್ಕ್ |

**ಎಂ.ಎ. ಸಾಧಿಕ್**

ಪಿ.ಆರ್. 946 ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು

**ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು**

**ಪ್ರಕಟಣೆ**

**ಸಂಖ್ಯೆ: ಜಿಸಕ:ಬೆಂಗ್ರಾ:ಕಾಪಧ:ಸಿಆರ್ 1:2005-06, ದಿನಾಂಕ: 21ನೇ ಜೂನ್ 2005**

**ವಿಷಯ:** 2005-06ನೇ ಸಾಲಿನ ಆಡಳಿತ ನ್ಯಾಯಾಧಿಕರಣ ಯೋಜನೆಯಡಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ತರಬೇತಿ ನೀಡುವ ಬಗ್ಗೆ.

2005-06ನೇ ಸಾಲಿಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ತಾಲ್ಲೂಕು ವ್ಯಾಪ್ತಿಯಲ್ಲಿ ಸಮಾಜ ಕಲ್ಯಾಣ ಇಲಾಖಾ ವತಿಯಿಂದ ಆಡಳಿತ ನ್ಯಾಯಾಧಿಕರಣ ಯೋಜನೆಯಡಿ ತರಬೇತಿ ನೀಡಲು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ತರಬೇತಿ ಅವಧಿ 4 ವರ್ಷಗಳಾಗಿದ್ದು, ಮಾಸಿಕ ರೂ. 1000.00 ಗಳ ಶಿಷ್ಯ ವೇತನ ನೀಡಲಾಗುವುದು. ತರಬೇತಿಗೆ ಆಯ್ಕೆಯಾದ

ಅಭ್ಯರ್ಥಿಯು ಜಿಲ್ಲಾ ಪ್ರಾಸಿಕ್ಯೂಟರ್ ಅಥವಾ 20 ವರ್ಷಕ್ಕಿಂತ ಹೆಚ್ಚಿನ ಅನುಭವ ಹೊಂದಿರುವ ವಕೀಲರ ಬಳಿ ತರಬೇತಿಗೆ ನಿಯೋಜನೆಯಾಗಿ ಅವರ ಅನುಭವ ಮತ್ತು ವಿಳಾಸವನ್ನು ಸಲ್ಲಿಸಬೇಕು. ಈ ಎಲ್ಲಾ ಷರತ್ತುಗಳನ್ನು ಪೂರೈಸಲು ಇಚ್ಛಿಯುಳ್ಳವರು ಮಾತ್ರ ಈ ಕೆಳಕಂಡ ಕಛೇರಿಯಲ್ಲಿ ಅರ್ಜಿ ಪಡೆಯಬಹುದು. ಈ ಪ್ರಕಟಣೆ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಒಂದು ತಿಂಗಳೊಳಗಾಗಿ ಅರ್ಜಿಯನ್ನು ಸಲ್ಲಿಸತಕ್ಕದ್ದು. ನಂತರ ಬಂದ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ. ಭರ್ತಿ ಮಾಡಿದ ಅರ್ಜಿಯನ್ನು ಅರ್ಜಿ ಪಡೆದ ನಂತರ ಈ ಕಛೇರಿಗೆ ಸಲ್ಲಿಸುವುದು.

**ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ,**

**4ನೇ ಮುಖ್ಯರಸ್ತೆ, 16ನೇ ಅಡ್ಡರಸ್ತೆ, (ಪೊಲೀಸ್ ಠಾಣೆ ಎದುರು) ಸಂಪಂಗಿ ರಾಮನಗರ, ಬೆಂಗಳೂರು-27**

**ಷರತ್ತುಗಳು:**

1. ಅರ್ಜಿ ಸಲ್ಲಿಸುವ ಅಭ್ಯರ್ಥಿಯು ಬೆಂಗಳೂರು ಗ್ರಾಮಾಂತರ ಜಿಲ್ಲೆಯವರಾಗಿರಬೇಕು.
2. ಅಭ್ಯರ್ಥಿಯು 35 ವರ್ಷದೊಳಗಿನ ವಯೋಮಿತಿಯಲ್ಲಿರಬೇಕು.
3. ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಮೊದಲು 2 ವರ್ಷಗಳ ಒಳಗೆ ಕಾನೂನು ಪದವಿ ಪಡೆದಿರಬೇಕು.
4. ಆಯ್ಕೆಯಾದ ಅಭ್ಯರ್ಥಿಗಳು ಯಾವುದೇ ಕಾರಣಕ್ಕೂ ತರಬೇತಿಯನ್ನು ಪೂರ್ಣಗೊಳಿಸದೇ ಬಿಟ್ಟು ಹೋಗಬಾರದು. ರಾಜ್ಯ ಅಥವಾ ಕೇಂದ್ರ ಸರ್ಕಾರಿ ನೌಕರಿ ಸಿಕ್ಕಿದ್ದಲ್ಲಿ ಮಾತ್ರ ನಿಯಮ ಸಡಿಲಿಸಲಾಗುವುದು. ಒಂದು ವೇಳೆ ತರಬೇತಿ ಮಧ್ಯಂತರದಲ್ಲಿ ಬಿಟ್ಟು ಹೋದರೆ ಅಂತಹವರ ಶಿಷ್ಯವೇತನವನ್ನು ನಿಯಮಾನುಸಾರ ವಸೂಲಿ ಮಾಡಲಾಗುವುದು.
5. ಸುಳ್ಳು ಮಾಹಿತಿಯನ್ನು ದಾಖಲಾತಿಗಳನ್ನು ಒದಗಿಸಿ ಆಯ್ಕೆಯಾದ ಅಭ್ಯರ್ಥಿಗಳನ್ನು ಕಾನೂನು ಪ್ರಕಾರ ಶಿಕ್ಷೆಗೆ ಗುರಿಪಡಿಸಲಾಗುವುದು. ಹಾಗೂ ಅಂತಹ ಅಭ್ಯರ್ಥಿಗಳಿಂದ ತರಬೇತಿ ಅವಧಿಯಲ್ಲಿ ನೀಡಿದ ಶಿಷ್ಯವೇತನದ ಶೇಕಡ 10ರ ಬಡ್ಡಿಯೊಂದಿಗೆ ವಸೂಲಿ ಮಾಡಲಾಗುವುದು.
6. ಅರ್ಜಿಯಲ್ಲಿ ಪೂರ್ಣ ಮಾಹಿತಿ ಇಲ್ಲದಿದ್ದಲ್ಲಿ ಅರ್ಜಿ ಅಪೂರ್ಣವಾಗಿದ್ದಲ್ಲಿ ಅಂತಹ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ.
7. ಆಯ್ಕೆ ಸಮಿತಿಯ ತೀರ್ಮಾನವೇ ಅಂತಿಮವಾಗುತ್ತದೆ.

ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು,
ಪಿ.ಆರ್. 947 ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

## ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ವಿಜಾಪುರ

## ಪ್ರಕಟಣೆ

**ಸಂಖ್ಯೆ: ಜಿಸಕ:ಲೆಕ್ಕ:ಕಾಪಅ:ಸಿಆರ್:2004-05, ದಿನಾಂಕ: 17ನೇ ಜೂನ್ 2005**

ಸಮಾಜ ಕಲ್ಯಾಣ ಇಲಾಖೆಯಿಂದ ಸನ್ 2005-06ನೇ ಸಾಲಿಗಾಗಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧಿಕರಣ ತರಬೇತಿ ನೀಡುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ. ವಿಜಾಪೂರ ಜಿಲ್ಲೆಯಲ್ಲಿ ವಾಸವಾಗಿರುವ ಪ.ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧಿಕರಣ ತರಬೇತಿಗಾಗಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಸದರಿ ಯೋಜನೆಯಡಿ ತರಬೇತಿ ಹೊಂದಲು ಅರ್ಜಿಗಳನ್ನು ಸಲ್ಲಿಸಬಯಸುವ ಅಭ್ಯರ್ಥಿಗಳು ಈ ಕೆಳಕಂಡ ಅರ್ಹತೆಗಳನ್ನು ಹೊಂದಿರುವವರು ಆಗಿರತಕ್ಕದ್ದು.

1. ಈ ಯೋಜನೆಯಡಿ ಅರ್ಜಿದಾರರು ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರಬೇಕು. ಹಾಗೂ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕಕ್ಕೆ ಎರಡು ವರ್ಷದಿಂದ ಈಚೆಗೆ ಕಾನೂನು ಪದವಿಯಲ್ಲಿ ಉತ್ತೀರ್ಣರಾಗಿರಬೇಕು. ಅಂದರೆ 2003-04 ಮತ್ತು 2004-05 ರಲ್ಲಿ ಜರುಗಿದ ಅಂತಿಮ ಕಾನೂನು ಪರೀಕ್ಷೆಗಳಲ್ಲಿ ಪಾಸಾದವರು ಮಾತ್ರ ಅರ್ಜಿಗಳನ್ನು ಸಲ್ಲಿಸಲು ಅರ್ಹರಾಗಿರುತ್ತಾರೆ.
2. ವಕೀಲಿ ವೃತ್ತಿಯನ್ನು ನಡೆಸಲು ಅರ್ಹತೆ ಪಡೆದಿರುವ ಕಾನೂನು ಪದವೀಧರರು ಮಾತ್ರ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ.
3. ಅವಧಿ ಮೀರಿ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
4. ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕದಂದು ಅಭ್ಯರ್ಥಿಯ ಗರಿಷ್ಠ ವಯಸ್ಸು 35ಕ್ಕೆ ಮೀರಿರಕೂಡದು.
5. ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳು ಮಧ್ಯದಲ್ಲಿ ತರಬೇತಿ ಬಿಟ್ಟು ಹೋಗಬಾರದು. ಒಂದು ವೇಳೆ ಬಿಟ್ಟು ಹೋದಲ್ಲಿ ಶಿಷ್ಯವೇತನದ ಮೊತ್ತವನ್ನು ಕಂದಾಯ ಬಾಕಿ ಅಂತಾ ವಸೂಲಿ ಮಾಡಲಾಗುವುದು.
6. ತರಬೇತಿಯ ಅವಧಿ ನಾಲ್ಕು (4) ವರ್ಷಗಳದ್ದು ಆಗಿದ್ದು ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ಪ್ರತಿ ತಿಂಗಳು ರೂ. 1000.00 ರಂತೆ ತರಬೇತಿ ಭತ್ಯೆ ನೀಡಲಾಗುವುದು.
7. ತರಬೇತಿಗೆ ಅಂತಿಮವಾಗಿ ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್ ಸರ್ಕಾರಿ ವಕೀಲರು ಅಥವಾ 20 ವರ್ಷಕ್ಕೂ ಮೇಲ್ಪಟ್ಟು ವಕೀಲಿ ವೃತ್ತಿ ನಡೆಸಿದ ಖಾಸಗಿ ವಕೀಲರುಗಳ ಬಳಿ ತರಬೇತಿಗೆ ನಿಯೋಜಿಸಲಾಗುವುದು.

ಅರ್ಹ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಭರ್ತಿ ಮಾಡಿ ಆದಾಯ ಪ್ರಮಾಣ ಪತ್ರ, ಜಾತಿ ಪ್ರಮಾಣ ಪತ್ರ, ಜನ್ಮ ದಾಖಲೆಯ ಕುರಿತು ಎಸ್‌ಎಸ್‌ಎಲ್‌ಸಿ ಅಂಕಪಟ್ಟಿ ಬಾರ್ ಅಸೋಸಿಯೇಷನ್‌ನ ಸದಸ್ಯತ್ವ ಪ್ರಮಾಣ ಪತ್ರ, ಕಾನೂನು ಪದವಿ ಪಾಸ್ ಮಾಡಿದ ಬಗ್ಗೆ ಅಂಕಪಟ್ಟಿ ಮುಂತಾದ ಶೈಕ್ಷಣಿಕ ಅರ್ಹತೆ ಕುರಿತಂತೆ ದೃಢೀಕರಣ ಪ್ರಮಾಣ ಪತ್ರಗಳೊಂದಿಗೆ ದಿನಾಂಕ: 16.7.2005 ರ ಒಳಗಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳವರ ಕಾರ್ಯಾಲಯ, ವಿಜಾಪೂರ ಇವರಿಗೆ ಅರ್ಜಿ ತಲುಪುವಂತೆ ಸಲ್ಲಿಸತಕ್ಕದ್ದು. ಮಾನ್ಯ ಮುಖ್ಯಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ವಿಜಾಪೂರ ರವರ ಅಧ್ಯಕ್ಷತೆಯಲ್ಲಿ ಸರ್ಕಾರದಿಂದ ರಚಿತವಾಗಿರುವ ಆಯ್ಕೆ ಸಮಿತಿಯು ಅಭ್ಯರ್ಥಿಗಳನ್ನು ಸಂದರ್ಶನದ ಮೂಲಕ ಆಯ್ಕೆ ಮಾಡಲಾಗುವುದು.

ಅರ್ಜಿ ನಮೂನೆ ಮತ್ತು ಇತರೆ ಹೆಚ್ಚಿನ ವಿವರಗಳಿಗಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳವರ ಕಾರ್ಯಾಲಯ, ಹಳೆ ಜಿಲ್ಲಾ ಪಂಚಾಯತ್ ಕಟ್ಟಡ ಆನಂದ ಮಹಲ್ ಹತ್ತಿರ ವಿಜಾಪೂರ ಇಲ್ಲಿ ಸಂಪರ್ಕಿಸಿ ಪಡೆಯಬಹುದು.

ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು
ಪಿ.ಆರ್. 948 ಹಾಗೂ ಸದಸ್ಯ-ಕಾರ್ಯದರ್ಶಿ ಜಿಲ್ಲಾಮಟ್ಟದ ಕಾನೂನು
ಪದವೀಧರರ ಆಡಳಿತ ನ್ಯಾಯಾಧಿಕರಣ ತರಬೇತಿ ಆಯ್ಕೆ ಸಮಿತಿ,
ವಿಜಾಪೂರ ಜಿಲ್ಲೆ.

**ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬಳ್ಳಾರಿ ಇವರ ನಡವಳಿಗಳು**

**ಉಪಸ್ಥಿತರು:** ಸಿದ್ದಲಿಂಗೇಶ್ವರ
ಪ್ರಾದೇಶಿಕ ಸಾರಿಗೆ ಅಧಿಕಾರಿ, ಬಳ್ಳಾರಿ

**ವಿಷಯ:** ವಾಹನ ಸಂಖ್ಯೆ: MEK-7948 ಮೋಟಾರ್ ಸೈಕಲ್ ವಾಹನದ ನೋಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1. ವಾಹನ ಮಾಲೀಕರ ಅರ್ಜಿ ದಿನಾಂಕ: 7.6.2005.
2. ವಾಹನ ನಿರೀಕ್ಷಕರ ವರದಿ ದಿನಾಂಕ: 10.6.2005.

**ಪ್ರಸ್ತಾವನೆ:**

ಮೋಟಾರು ವಾಹನ ಸಂಖ್ಯೆ: MEK-7948 ಮೋಟಾರ್ ಸೈಕಲ್ ವಾಹನದ ಮಾಲೀಕರು ವಾಹನದ ತೆರಿಗೆಯನ್ನು ಜೀವಾವಧಿವರೆಗೆ ಪಾವತಿಸಿ, ವಾಹನವು ರಿಪೇರಿಯಾಗದ ಸ್ಥಿತಿಯಲ್ಲಿದೆ ಎಂಬ ಕಾರಣ ನೀಡಿ ನೋಂದಣಿ ರದ್ದುಪಡಿಸಲು ವಿನಂತಿಸಿಕೊಂಡಿದ್ದಾರೆ. ಅದಕ್ಕೆ ಪೂರಕವಾಗಿ ಈ ಕಛೇರಿಯ ವಾಹನ ನಿರೀಕ್ಷಕರು ತಮ್ಮ ವರದಿ ದಿನಾಂಕ: 10.6.2005 ರಲ್ಲಿ ನೋಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿದ್ದಾರೆ. ಈ ಮೇಲಿನ ಅಂಶಗಳನ್ನು ಪರಿಗಣಿಸಿ, ಸದರಿ ವಾಹನದ ಮೇಲೆ ತೆರಿಗೆ ಬಾಕಿ, ಲೆಕ್ಕಪತ್ರ ತನಿಖಾ ಆಕ್ಷೇಪಣೆ ಅಥವಾ ಡಿ.ಎಸ್.ಎ. ಪ್ರಕರಣಗಳು ಏನಾದರೂ ಬಾಕಿಯಿರುವುದು ಕಂಡು ಬಂದಲ್ಲಿ ಸದರಿ ವಾಹನದ ಮಾಲೀಕರೆ ಪಾವತಿಸಬೇಕೆಂಬ ನಿಬಂಧನೆಯೊಂದಿಗೆ ದಿನಾಂಕ: 13.6.2005 ರಿಂದ ಅನ್ವಯವಾಗುವಂತೆ ನೋಂದಣಿಯನ್ನು ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

ಆದೇಶ

**ಸಂ: ಪ್ರಾಸಾಅ:ಬಳ್ಳಾರಿ:ನೋಂದಣಿ: MEK-7948:05-06 ದಿನಾಂಕ: 13ನೇ ಜೂನ್ 2005.**

ಮೇಲ್ಕಂಡ ವಿಷಯವನ್ನು ಪರಿಗಣಿಸಿ ಮೋಟಾರು ವಾಹನ ಕಾಯ್ದೆ 1988 ಕಲಂ 55ರ ಅಡಿಯಲ್ಲಿ ದತ್ತವಾದ ಅಧಿಕಾರದ ಮೇರೆಗೆ ನೋಂದಣಿ ಅಧಿಕಾರಿ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬಳ್ಳಾರಿ ಆದ ನಾನು ವಾಹನ ಸಂಖ್ಯೆ MEK-7948 ಮೋಟಾರ್ ಸೈಕಲ್ ವಾಹನದ ನೋಂದಣಿಯನ್ನು ದಿನಾಂಕ: 13.6.2005 ರಿಂದ ಅನ್ವಯವಾಗುವಂತೆ ಸದರಿ ವಾಹನದ ನೋಂದಣಿಯನ್ನು ವಾಹನದ ಮೇಲೆ ಸರಕಾರಕ್ಕೆ ಬರಬೇಕಾದ ಬಾಕಿ ಏನಾದರೂ ಇದ್ದರೆ ಮಾಲೀಕರೇ ಪಾವತಿಸಬೇಕೆಂಬ ನಿಬಂಧನೆಯೊಂದಿಗೆ ರದ್ದುಪಡಿಸಲಾಗಿದೆ.

| | | |
|---|---|---|
| 1 | ನೋಂದಣಿ ಸಂಖ್ಯೆ | MEK-7948 |
| 2 | ವಾಹನದ ವರ್ಗ | Motor Cycle |
| 3 | ತಯಾರಕರ ಹೆಸರು | Luna Moped |
| 4 | ಅಡಿಗಟ್ಟು ಸಂಖ್ಯೆ | LM.472777 |
| 5 | ಯಂತ್ರದ ಸಂಖ್ಯೆ | KE.453807 |
| 6 | ಮಾಲೀಕರ ಹೆಸರು, ವಿಳಾಸ | Dr. T. Suresh S/o Late Krishnamurthychar, 17th, 6B, 6th Cross, S.N. Pet, Bellari |

ಪಿ.ಆರ್. 949 ಪ್ರಾದೇಶಿಕ ಸಾರಿಗೆ ಅಧಿಕಾರಿ, ಬಳ್ಳಾರಿ.

**ಕಾನೂನು ಮಾಪನಶಾಸ್ತ್ರ ನಿಯಂತ್ರಕರ ಕಛೇರಿ,**
**ನಂ. 1, ಅಲಿ ಆಸ್ಕರ್ ರಸ್ತೆ, ಪಿ.ಬಿ.ನಂ. 175, ಬೆಂಗಳೂರು**
**ಅಧಿಸೂಚನೆ**

**ಸಂಖ್ಯೆ: ಕಾಮಾನಿ/ಸನಿತಾ/ಕ್ಷೇವ್ಯಾ/ಸಿಆರ್.70:2003-04, ದಿನಾಂಕ: 25ನೇ ಜೂನ್ 2005**

ಪ್ರಮಾಣಬದ್ಧ ತೂಕ ಮತ್ತು ಅಳತೆ (ಅಮಲುಜಾರಿ) ಅಧಿನಿಯಮ 1985 (1985ರ ಸಂಖ್ಯೆ 54) ಕಲಂ 5ರ ಉಪಕಲಂ 3 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸಿ.ಎಂ. ಮಲ್ಲಿಕಾರ್ಜುನ, ಕರ್ನಾಟಕ ರಾಜ್ಯ ಕಾನೂನು ಮಾಪನಶಾಸ್ತ್ರ ನಿಯಂತ್ರಕನಾದ ನಾನು, ಈ ಕೆಳಕಂಡ ಕಛೇರಿಗಳ ಕ್ಷೇತ್ರ ವ್ಯಾಪ್ತಿಯನ್ನು ಮರುವಿಂಗಡಣೆ ಮಾಡಿ, ಈ ಕೆಳಕಂಡ ಯಾದಿಯ ಸಂಖ್ಯೆ 2 ರಲ್ಲಿರುವ ಅಧಿಕಾರಿಗಳು ಯಾದಿಯ ಸಂಖ್ಯೆ 4 ರಲ್ಲಿನ ಕ್ಷೇತ್ರವ್ಯಾಪ್ತಿಯಲ್ಲಿ ಅವರಿಗೆ ನೀಡಿರುವ ಅಧಿಕಾರವನ್ನು ಚಲಾಯಿಸಲು ಹಾಗೂ ಕರ್ತವ್ಯ ನಿರ್ವಹಿಸಲು ತಕ್ಷಣದಿಂದ ಜಾರಿಗೆ ಬರುವಂತೆ ಕ್ಷೇತ್ರವ್ಯಾಪ್ತಿಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ಕ್ಷೇತ್ರ ಮರುವಿಂಗಡಣೆಗೆ ಒಳಪಡುವ ಕಛೇರಿಗಳ ಹೆಸರು | ಕಛೇರಿಯ ಪ್ರಸಕ್ತ ಕ್ಷೇತ್ರವ್ಯಾಪ್ತಿ | ಮರುವಿಂಗಡಣಾ ನಂತರದ ಕ್ಷೇತ್ರವ್ಯಾಪ್ತಿ |
|---|---|---|---|
| 1 | 2 | 3 | 4 |
| 1 | ಉಪನಿಯಂತ್ರಕರು, ಬೆಂಗಳೂರು ಜಿಲ್ಲೆ | ಸಹಾಯಕ ನಿಯಂತ್ರಕರು, ಬೆಂಗಳೂರು 1, 2, 3, 4ನೇ ವೃತ್ತ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕ್ಷೇತ್ರವ್ಯಾಪ್ತಿ | ಸಹಾಯಕ ನಿಯಂತ್ರಕರು, ಬೆಂಗಳೂರು 1, 2, 3, 4ನೇ ವೃತ್ತ, ಇವರುಗಳ ಕ್ಷೇತ್ರವ್ಯಾಪ್ತಿ |
| 2 | ಉಪನಿಯಂತ್ರಕರು, ಬೆಂಗಳೂರು ವಿಭಾಗ | ಸಹಾಯಕ ನಿಯಂತ್ರಕರು, ತುಮಕೂರು, ಚಿತ್ರದುರ್ಗ, ದಾವಣಗೆರೆ, ಶಿವಮೊಗ್ಗ, ಕೋಲಾರ ಜಿಲ್ಲೆಗಳ ಕ್ಷೇತ್ರವ್ಯಾಪ್ತಿ | ಸಹಾಯಕ ನಿಯಂತ್ರಕರು, ತುಮಕೂರು, ಚಿತ್ರದುರ್ಗ, ದಾವಣಗೆರೆ, ಶಿವಮೊಗ್ಗ, ಕೋಲಾರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಗಳ ಕ್ಷೇತ್ರವ್ಯಾಪ್ತಿ |
| 3 | ಸಹಾಯಕ ನಿಯಂತ್ರಕರು, ಮಡಿಕೇರಿ | ಮಡಿಕೇರಿ ಜಿಲ್ಲೆಯಲ್ಲಿ ಸಹಾಯಕ ನಿಯಂತ್ರಕರ ಕೆಲಸ | ಮಡಿಕೇರಿ ಜಿಲ್ಲೆಯಲ್ಲಿ ಸಹಾಯಕ ನಿಯಂತ್ರಕರ ಕೆಲಸದ ಜೊತೆಗೆ ಮಡಿಕೇರಿ ತಾಲ್ಲೂಕಿನ ನಿರೀಕ್ಷಕರ ಕೆಲಸ |
| 4 | ನಿರೀಕ್ಷಕರು, ಮಡಿಕೇರಿ | ಮಡಿಕೇರಿ ಜಿಲ್ಲೆ | ಮಡಿಕೇರಿ ತಾಲ್ಲೂಕು ಹೊರತುಪಡಿಸಿ ಮಡಿಕೇರಿ ಜಿಲ್ಲೆಯಲ್ಲಿ ನಿರೀಕ್ಷಕರ ಕೆಲಸ |

| 1 | 2 | 3 | 4 |
|---|---|---|---|
| 5 | ಸಹಾಯಕ ನಿಯಂತ್ರಕರು, ಗದಗ | ಗದಗ ಜಿಲ್ಲೆಯಲ್ಲಿ ಸಹಾಯಕ ನಿಯಂತ್ರಕರ ಕೆಲಸ | ಗದಗ ಜಿಲ್ಲೆಯಲ್ಲಿ ಸಹಾಯಕ ನಿಯಂತ್ರಕರ ಕೆಲಸದ ಜೊತೆಗೆ ಗದಗ ನಗರದ (ಪುರಸಭೆ ಸರಹದ್ದಿನೊಳಗೆ) ನಿರೀಕ್ಷಕರ ಕೆಲಸ |
| 6 | ನಿರೀಕ್ಷಕರು, ಗದಗ | ಗದಗ, ಶಿರಹಟ್ಟಿ, ಮುಂಡರಗಿ | ಗದಗ ನಗರ ಹೊರತುಪಡಿಸಿ, ಗದಗ ತಾಲ್ಲೂಕು ಶಿರಹಟ್ಟಿ ಮತ್ತು ಮುಂಡರಗಿ ತಾಲ್ಲೂಕುಗಳು |
| 7 | ಸಹಾಯಕ ನಿಯಂತ್ರಕರು, ಹಾವೇರಿ | ಹಾವೇರಿ ಜಿಲ್ಲೆ | ಹಾವೇರಿ ಜಿಲ್ಲೆಯಲ್ಲಿ ಸಹಾಯಕ ನಿಯಂತ್ರಕರ ಕೆಲಸದ ಜೊತೆಗೆ ಹಾವೇರಿ ನಗರದ (ಪುರಸಭೆ ಸರಹದ್ದಿನೊಳಗೆ) ನಿರೀಕ್ಷಕರ ಕೆಲಸ |
| 8 | ನಿರೀಕ್ಷಕರು, ಹಾವೇರಿ | ಹಾವೇರಿ, ಹಾನಗಲ್ | ಹಾವೇರಿ ನಗರ ಹೊರತುಪಡಿಸಿ, ಹಾವೇರಿ ತಾಲ್ಲೂಕು ಮತ್ತು ಹಾನಗಲ್ |
| 9 | ಸಹಾಯಕ ನಿಯಂತ್ರಕರು, ಕೊಪ್ಪಳ | ಕೊಪ್ಪಳ ಜಿಲ್ಲೆ | ಕೊಪ್ಪಳ ಜಿಲ್ಲೆಯಲ್ಲಿನ ಸಹಾಯಕ ನಿಯಂತ್ರಕರ ಕೆಲಸದ ಜೊತೆಗೆ ಗಂಗಾವತಿ ತಾಲ್ಲೂಕಿನ ನಿರೀಕ್ಷಕರ ಕೆಲಸ |
| 10 | ನಿರೀಕ್ಷಕರು, ಕೊಪ್ಪಳ | ಕೊಪ್ಪಳ, ಗಂಗಾವತಿ, ಯಲಬುರ್ಗಿ, ಕುಷ್ಠಗಿ | ಕೊಪ್ಪಳ, ಯಲಬುರ್ಗಿ ಮತ್ತು ಕುಷ್ಠಗಿ ತಾಲ್ಲೂಕುಗಳು |

**ಸಿ.ಎಂ. ಮಲ್ಲಿಕಾರ್ಜುನ**

ಪಿ.ಆರ್. 950 ಕಾನೂನು ಮಾಪನಶಾಸ್ತ್ರ ನಿಯಂತ್ರಕರು

## ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು

### ಅಧಿಸೂಚನೆ

**ಸಂಖ್ಯೆ: ಸಕಇ 293 ಬಿಇಟಿ 2004, ದಿನಾಂಕ: 28ನೇ ಜೂನ್ 2005**

ಸರ್ಕಾರಿ ಆದೇಶ ಸಂಖ್ಯೆ: ಸಕಇ 94 ಬಿಸಿಎ 2005, ದಿನಾಂಕ: 13.5.2005 ನ್ನು ಭಾಗಶಃ ಮಾರ್ಪಡಿಸಿ, ಶ್ರೀಯುತ ಎ. ಸತ್ಯನಾರಾಯಣ, ಯೋಜನಾ ಸಮನ್ವಯ ಅಧಿಕಾರಿ, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ, ಕೊಡಗು ಜಿಲ್ಲೆ, ಮಡಿಕೇರಿ, ಇವರ ಸೇವೆಯನ್ನು ಮಾತೃ ಇಲಾಖೆಯಾದ ಭಾರತ ಸರ್ಕಾರದ ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಇಲಾಖೆ, ನವದೆಹಲಿ, ಇಲ್ಲಿಗೆ ಹಿಂತಿರುಗಿಸಿ ಆದೇಶಿಸಿದ್ದು, ಸದರಿ ಆದೇಶವನ್ನು ರದ್ದುಗೊಳಿಸಿ, ಶ್ರೀಯುತ ಎ. ಸತ್ಯನಾರಾಯಣ ಇವರನ್ನು ಯೋಜನಾ ಸಮನ್ವಯ ಅಧಿಕಾರಿ, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ, ಕೊಡಗು ಜಿಲ್ಲೆ, ಮಡಿಕೇರಿ, ಇಲ್ಲಿಯೇ ಮುಂದಿನ ಆದೇಶವಾಗುವವರೆಗೆ ಮುಂದುವರೆಸಿ ಸರ್ಕಾರ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 951 **ಎಂ.ಎಸ್. ಮರುಳಸಿದ್ದಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಮಾಜ ಕಲ್ಯಾಣ ಇಲಾಖೆ.

## ಕಾನೂನು ಮಾಪನಶಾಸ್ತ್ರ ನಿಯಂತ್ರಕರು

## ಕಛೇರಿ ನಂ. 1, ಅಲಿ ಆಸ್ಕರ್ ರಸ್ತೆ, ಪಿ.ಬಿ. ನಂ. 175, ಬೆಂಗಳೂರು

### ಅಧಿಸೂಚನೆ

**ಸಂಖ್ಯೆ: ಕಾಮಾಇ:ಸನಿತಾ:ಕ್ಷೇವ್ಯಾ:ಸಿಆರ್.70:03-04, ದಿನಾಂಕ: 30ನೇ ಜೂನ್ 2005**

ದಿನಾಂಕ: 25.6.05 ರಂದು ಈ ಕಛೇರಿಯಿಂದ ಮೇಲಿನ ಸಮಸಂಖ್ಯೆಯಲ್ಲಿ ಹೊರಡಿಸಲಾದ ಕ್ಷೇತ್ರವ್ಯಾಪ್ತಿ ಮರುವಿಂಗಡಣಾ ಅಧಿಸೂಚನೆಯಲ್ಲಿ ಕ್ರಮ ಸಂಖ್ಯೆ 8ರ ಕಲಂ 3 ರಲ್ಲಿ ನಮೂದಿಸಿರುವ ಕ್ಷೇತ್ರವ್ಯಾಪ್ತಿಯಲ್ಲಿ ಬ್ಯಾಡಗಿ ಕ್ಷೇತ್ರ ವ್ಯಾಪ್ತಿ ಬಿಟ್ಟು ಹೋಗಿರುತ್ತದೆ.

ಆದುದರಿಂದ, ಕಲಂ 3 ರಲ್ಲಿ ಹಾವೇರಿ, ಹಾನಗಲ್ ಜೊತೆಗೆ ಬ್ಯಾಡಗಿ ಎಂದು ಸೇರಿಸಿಕೊಂಡು ಓದಿಕೊಳ್ಳಲು ಈ ಮೂಲಕ ಆದೇಶಿಸಿದೆ.

**ಸಿ.ಎಂ. ಮಲ್ಲಿಕಾರ್ಜುನ**

ಪಿ.ಆರ್. 952 ಕಾನೂನು ಮಾಪನಶಾಸ್ತ್ರ ನಿಯಂತ್ರಕರು.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 54 ಸೇಇಮು 2004, ಬೆಂಗಳೂರು, ದಿನಾಂಕ: 27ನೇ ಜೂನ್ 2005**

ಶ್ರೀ ಬಿ. ದಯಾನಂದ, ಮುಖ್ಯ ಇಂಜಿನಿಯರ್, ಕರ್ನಾಟಕ ಆರೋಗ್ಯ ಪದ್ಧತಿಗಳ ಅಭಿವೃದ್ಧಿ ಯೋಜನೆ, ಬೆಂಗಳೂರು ಇವರಿಗೆ ಆಡಳಿತಾತ್ಮಕ ಹಿತದೃಷ್ಟಿಯಿಂದ ವೇತನ ಶ್ರೇಣಿ ರೂ. 14,960-18,720ರ ಪ್ರಧಾನ ಇಂಜಿನಿಯರ್ ವೃಂದಕ್ಕೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958ರ ನಿಯಮ 32ರಡಿ ಸ್ವತಂತ್ರ ಪ್ರಭಾರದಿಂದ ಮೇಲೆ ನೇಮಕ ಮಾಡಿ ಆಡಳಿತಾಧಿಕಾರಿ, ಕಾಡಾ, ಗುಲ್ಬರ್ಗಾ ಹುದ್ದೆಗೆ ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸ್ಥಳ ನಿಯುಕ್ತಿಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 954 **ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಂಇ 45 ಎಲ್‌ಆರ್‌ಎಂ 2005, ಬೆಂಗಳೂರು, ದಿನಾಂಕ: 10ನೇ ಜೂನ್ 2005**

ನಾಯಕ ಸ್ಟೂಡೆಂಟ್ ಫೆಡರೇಶನ್, ಗೋಕಾಕ್ ಇವರು ಬೆಳಗಾವಿ ಜಿಲ್ಲೆ, ಗೋಕಾಕ್ ತಾಲ್ಲೂಕು, ಕುಲಗೋಡ ಗ್ರಾಮದ ಸರ್ವೆ ನಂ. 326/1 ರಲ್ಲಿ 4 ಎಕರೆ 06 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಮಾಡಿದ ಬೇಡಿಕೆ ಹಾಗೂ ನಮೂನೆ 15-ಎ ಮತ್ತು 15-ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿ, ಬೆಳಗಾವಿ ಜಿಲ್ಲೆ ಇವರು ತಮ್ಮ ಪತ್ರ ಸಂಖ್ಯೆ: ಕಂಶಾ/ಭೂಸು/ವಿವ/128/03-04, ದಿನಾಂಕ: 8.2.2005 ರಲ್ಲಿ ಪ್ರಸ್ತಾಪಿತ ಗ್ರಾಮದ ಮೇಲ್ಕಂಡ ಸರ್ವೆ ನಂಬರುಗಳಲ್ಲಿ ಒಟ್ಟು 4 ಎಕರೆ 06 ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109 ರ ಅಡಿ ಸರ್ಕಾರದ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಸಂಸ್ಥೆಯು ಬಾಂಬೆ ಪಬ್ಲಿಕ್ ಟ್ರಸ್ಟ್ ನಿಯಮ, 1950 ನಂ. ಇ, 885(ಬಿ.ಜಿ.ಎಂ) ಇವರಲ್ಲಿ ದಿನಾಂಕ: 29.7.1991 ರಂದು ನೋಂದಾಯಿಸಲ್ಪಟ್ಟಿದೆ. ಅರ್ಜಿದಾರರು ಪ್ರಾಜೆಕ್ಟ್ ವರದಿಯನ್ನು ಸಲ್ಲಿಸಿದ್ದು, ಅದು ಅರ್ಜಿದಾರರ ಉದ್ದೇಶಕ್ಕೆ ಪೂರಕವಾಗಿದೆ. ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ, 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109(1)(ii) ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯೂನಿಟ್‌ವರೆಗೆ ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ಅಧಿನಿಯಮ, 1995ರ ಕಲಂ 109 (1)(ii) ಮತ್ತು ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38-ಬಿ(2)(ಎ) ಮತ್ತು (ಬಿ) ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 63, 79-ಎ, 79-ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ನಾಯಕ ಸ್ಟೂಡೆಂಟ್ ಫೆಡರೇಶನ್, ಗೋಕಾಕ್ ಇವರು ಬೆಳಗಾವಿ ಜಿಲ್ಲೆ, ಗೋಕಾಕ್ ತಾಲ್ಲೂಕು, ಕುಲಗೋಡ ಗ್ರಾಮದ ಸರ್ವೆ ನಂ. 326/1 ರಲ್ಲಿ 4 ಎಕರೆ 06 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರ ಅಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:-

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ./ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
4. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯ್ತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
6. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
7. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ ಅಭಿವೃದ್ಧಿ ಪ್ರಾಧಿಕಾರ/ ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 955

**ಶಿವಲಿಂಗ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)

ಕಂದಾಯ ಇಲಾಖೆ (ಭೂಸುಧಾರಣೆ)

**ಒಳಾಡಳಿತ ಮತ್ತು ಸಾರಿಗೆ ಇಲಾಖೆ**

**ಅಧಿಸೂಚನೆ ಸಂಖ್ಯೆ: ಒಇ 459 ಪಿಪಿಇ 2005, ಬೆಂಗಳೂರು, ದಿನಾಂಕ: 21ನೇ ಜೂನ್ 2005**

ಈ ಕೆಳಕಂಡ ತಃಖ್ತೆಯ ಅಂಕಣ (2) ರಲ್ಲಿ ಸೂಚಿಸಿರುವ ನ್ಯಾಯಾಲಯಗಳಲ್ಲಿ ತಃಖ್ತೆಯ ಅಂಕಣ (3) ಮತ್ತು (4) ರಲ್ಲಿ ನಮೂದಿಸಿರುವ ಪ್ರಕರಣಗಳು ಮತ್ತು ಪ್ರತಿ ಪ್ರಕರಣಗಳು ದಾಖಲಾಗಿರುತ್ತವೆ. ಆದ ಕಾರಣ, ಅಂಕಣ (4) ರಲ್ಲಿ ನಮೂದಿಸಿರುವ ಪ್ರತಿ ಪ್ರಕರಣಗಳಲ್ಲಿ ಸರ್ಕಾರದ ಪರವಾಗಿ ಹಾಜರಾಗಲು ಮತ್ತು ಪ್ರಕರಣವನ್ನು ನಡೆಸಲು ಅಂಕಣ (5) ರಲ್ಲಿ ಸೂಚಿಸುವ ಅಭಿಯೋಜಕರನ್ನು ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಿಸಿದೆ.

| ಕ್ರ.ಸಂ. | ನ್ಯಾಯಾಲಯದ ಹೆಸರು | ಪ್ರಕರಣ ಸಂಖ್ಯೆ | ಕೌಂಟರ್ ಪ್ರಕರಣ ಸಂಖ್ಯೆ | ಕೌಂಟರ್ ಪ್ರಕರಣದಲ್ಲಿ ಸರ್ಕಾರದ ಪರವಾಗಿ ಹಾಜರಾಗಲು ಮತ್ತು ಪ್ರಕರಣವನ್ನು ನಡೆಸಲು |
|---|---|---|---|---|
| 1 | 2 | 3 | 4 | 5 |
| 1 | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಜಮಖಂಡಿ | ಎಸ್‌ಸಿ. 5:03 | ಎಸ್‌ಸಿ. 29:03 | ಸರ್ಕಾರಿ ಅಭಿಯೋಜಕರು, 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬಾಗಲಕೋಟೆ |

| 1 | 2 | 3 | 4 | 5 |
|---|---|---|---|---|
| 2 | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಜಮಖಂಡಿ | ಎಸ್‌ಸಿ. 107:03 | ಎಸ್‌ಸಿ. 45:04 | ಸರ್ಕಾರಿ ಅಭಿಯೋಜಕರು, 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬಾಗಲಕೋಟೆ |
| 3 | -ಅದೇ- | ಎಸ್‌ಸಿ. 25:03 | ಎಸ್‌ಸಿ. 26:03 | -ಅದೇ- |
| 4 | 3ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಳಗಾವಿ | ಎಸ್‌ಸಿ. 137:03 | ಎಸ್‌ಸಿ. 187:03 | ವಿಶೇಷ ಸರ್ಕಾರಿ ಅಭಿಯೋಜಕರು, 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಳಗಾವಿ |
| 5 | -ಅದೇ- | ಎಸ್‌ಸಿ. 103:03 | ಎಸ್‌ಸಿ. 164:04 | -ಅದೇ- |
| 6 | 2ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಳಗಾವಿ | ಎಸ್‌ಸಿ. 224:05 | ಎಸ್‌ಸಿ. 255:04 | 1ನೇ ಅಪರ ಸರ್ಕಾರಿ ಅಭಿಯೋಜಕರು, 1ನೇ ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಳಗಾವಿ |
| 7 | ಜೆಎಮ್‌ಎಫ್‌ಸಿ ನ್ಯಾಯಾಲಯ, ಇಂಡಿ, ಬಿಜಾಪುರ ಜಿಲ್ಲೆ | ಸಿಸಿ. 607:01 | ಸಿಸಿ. 536:01 | ಸಹಾಯಕ ಸರ್ಕಾರಿ ಅಭಿಯೋಜಕರು, ಸಿವಿಲ್ ಜಡ್ಜ್ (ಜೂ.ಡಿ) ಜೆಎಮ್‌ಎಫ್‌ಸಿ ನ್ಯಾಯಾಲಯ, ಸಿಂಧಗಿ |
| 8 | -ಅದೇ- | ಸಿಸಿ. 515:02 | ಸಿಸಿ. 584:02 | -ಅದೇ- |
| 9 | -ಅದೇ- | ಸಿಸಿ. 483:03 | ಸಿಸಿ. 400:03 | -ಅದೇ- |
| 10 | -ಅದೇ- | ಸಿಸಿ. 242:03 | ಸಿಸಿ. 241:03 | -ಅದೇ- |
| 11 | 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬಿಜಾಪುರ | ಎಸ್‌ಸಿ. 67:02 | ಎಸ್‌ಸಿ. 143:02 | 1ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬಿಜಾಪುರದ ವಿಶೇಷ ಸರ್ಕಾರಿ ಅಭಿಯೋಜಕರು |
| 12 | 2ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಿಜಾಪುರ | ಎಸ್‌ಸಿ. 48:04 | ಎಸ್‌ಸಿ. 166:04 | 1ನೇ ಅಪರ ಸರ್ಕಾರಿ ಅಭಿಯೋಜಕರು, 1ನೇ ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಿಜಾಪುರ |
| 13 | 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬಿಜಾಪುರ | ಎಸ್‌ಸಿ. 86:03 | ಎಸ್‌ಸಿ. 104:03 | ವಿಶೇಷ ಸರ್ಕಾರಿ ಅಭಿಯೋಜಕರು, 1ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬಿಜಾಪುರ |
| 14 | ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಂಡ್ಯ | ಎಸ್‌ಸಿ. 23:00 | ಎಸ್‌ಸಿ. 72:01 | ಸರ್ಕಾರಿ ಅಭಿಯೋಜಕರು, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಂಡ್ಯ |
| 15 | 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ರಾಯಚೂರು | ಎಸ್‌ಸಿ. 160:92 | ಎಸ್‌ಸಿ. 167:02 | ವಿಶೇಷ ಸರ್ಕಾರಿ ಅಭಿಯೋಜಕರು, 1ನೇ ತ್ವರಿತ ವಿಲೇವಾರಿ ನ್ಯಾಯಾಲಯ, ರಾಯಚೂರು |
| 16 | ವಿಶೇಷ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕೋಲಾರ | ಎಸ್‌ಸಿ. 11:03 | ಎಸ್‌ಸಿ. 175:03 | 1ನೇ ಅಧಿಕ ಸರ್ಕಾರಿ ಅಭಿಯೋಜಕರು, 1ನೇ ಅಧಿಕ ನ್ಯಾಯಾಲಯ, ಕೋಲಾರ |
| 17 | 3ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಕೋಲಾರ | ಎಸ್‌ಸಿ. 251:04 | ಎಸ್‌ಸಿ. 245:04 | ವಿಶೇಷ ಸರ್ಕಾರಿ ಅಭಿಯೋಜಕರು, 2ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಕೋಲಾರ |
| 18 | 6ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಗುಲ್ಬರ್ಗಾ | ಎಸ್‌ಸಿ. 163:04 | ಎಸ್‌ಸಿ. 43:04 | ವಿಶೇಷ ಸರ್ಕಾರಿ ಅಭಿಯೋಜಕರು, 5ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಗುಲ್ಬರ್ಗಾ |
| 19 | -ಅದೇ- | ಎಸ್‌ಸಿ. 75:04 | ಎಸ್‌ಸಿ. 113:04 | -ಅದೇ- |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 956

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ ಮತ್ತು ಸು ಮತ್ತು ಅಭಿಯೋಗಗಳು)

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮದುಗಿರಿ ಉಪ ವಿಭಾಗ, ಮದುಗಿರಿ ಇವರ ನ್ಯಾಯಾಲಯದ ನಡವಳಿಕೆಗಳು**

**ವಿಷಯ:** ಪಾವಗಡ ತಾಲ್ಲೂಕು ಸೇವಾ ಸಹಕಾರ ಬ್ಯಾಂಕ್ ನಿ. ಚಿಕ್ಕಹಳ್ಳಿ, ಪಾವಗಡ ತಾಲ್ಲೂಕು ಇದರಲ್ಲಿ ಹಣ ದುರುಪಯೋಗ ಬಗ್ಗೆ ಶ್ರೀ ಮುತ್ತುಜ ಲೇಟ್ ಇವರ ಹೆಸರಿನಲ್ಲಿರುವ ಮತ್ತು ಅವರ ಕಾನೂನು ವಾರಸುದಾರರಾದ ಇಬ್ಬರು ಪತ್ನಿಯರು 1) ಶ್ರೀಮತಿ ಜೀನತ್‌ಜ ಮತ್ತು 2) ರಾಮಮ್ಮ ಉರುಫ್ ರಮೀಜಾಬಿ ಇವರುಗಳ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಸಹಕಾರಿ ಕಾಯಿದೆ ಕಲಂ 103ರ ಅಡಿಯಲ್ಲಿ ತೀರ್ಪು ಪೂರ್ವ ಜಪ್ತಿ ಆದೇಶ ಮಾಡುವ ಬಗ್ಗೆ.

**ಉಲ್ಲೇಖ:** 1) ಮ್ಯಾನೇಜರ್ ಸೇವಾ ಸಹಕಾರ ಬ್ಯಾಂಕ್ ನಿ. ಚಿಕ್ಕಹಳ್ಳಿ, ಪಾವಗಡ ತಾಲ್ಲೂಕು ಇವರ ಪತ್ರದ ದಿನಾಂಕ: 6.6.2005.

2) ಈ ನ್ಯಾಯಾಲಯದಲ್ಲಿ ವಿಚಾರಣೆ ನಡೆಯುತ್ತಿರುವ ಅಧಿಬಾರ ಅರ್ಜಿ ಸಂಖ್ಯೆ: 1:2005-06

**ಪ್ರಸ್ತಾವನೆ:**

ಶ್ರೀ ಮುತ್ತುಜ ಇವರು ಸೇವಾ ಸಹಕಾರ ಬ್ಯಾಂಕ್ ನಿ. ಚಿಕ್ಕಹಳ್ಳಿ, ಪಾವಗಡ ತಾಲ್ಲೂಕು ಇದರಲ್ಲಿ 1976-77 ರಿಂದ ದಿನಾಂಕ: 2.9.2003 ರವರೆಗೆ ಕಾರ್ಯದರ್ಶಿ : ವ್ಯವಸ್ಥಾಪಕರಾಗಿ ಸೇವೆ ಸಲ್ಲಿಸಿ ಸೇವೆಯಲ್ಲಿರುವಾಗಲೇ ಮೃತರಾಗಿರುತ್ತಾರೆ. ಇವರು ಸದರಿ ಸಂಘ : ಬ್ಯಾಂಕಿನಲ್ಲಿ ರೂ. 115673.12 ಗಳ ಹಣ ದುರುಪಯೋಗ ಪಡಿಸಿರುವುದು 2002-03 ಮತ್ತು 2003-04ನೇ ಸಾಲುಗಳ ಲೆಕ್ಕಪರಿಶೋಧನಾ ವರದಿಗಳ ರೀತ್ಯಾ ದೃಢಪಟ್ಟಿದ್ದು, ಈ ಹಣದ ವಸೂಲಾತಿಗೆ ಬ್ಯಾಂಕಿನ ಹಾಲಿ ವ್ಯವಸ್ಥಾಪಕರು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69ರ ಅಡಿಯಲ್ಲಿ ಲೇಟ್ ಮುತ್ತುಜ ರವರ ಕಾನೂನು ವಾರಸುದಾರರ ಮೇಲೆ ದಾವೆ ಹೂಡಿರುತ್ತಾರೆ. ಈ ದಾವೆಯನ್ನು ದಿನಾಂಕ: 27.4.2005 ರಂದು ರಿಜಿಸ್ಟರಿನಲ್ಲಿ ದಾಖಲಿಸಿಕೊಂಡು ದಿನಾಂಕ: 16.5.2005 ರಿಂದ ವಿಚಾರಣೆ ಪ್ರಾರಂಭಿಸಿದ್ದು ಈ ನ್ಯಾಯಾಲಯದಲ್ಲಿ ವಿಚಾರಣೆ ಪ್ರಕ್ರಿಯೆ ನಡೆಯುತ್ತಿರುತ್ತದೆ. ಅರ್ಜಿದಾರ ಬ್ಯಾಂಕ್ ಉಲ್ಲೇಖ (1)ರ ಪತ್ರದಲ್ಲಿ ಶ್ರೀ ಮುತ್ತುಜ ಲೇಟ್ ಇವರು ದುರುಪಯೋಗಪಡಿಸಿದ ಹಣ ರೂ. 115673.12 ಗಳ ವಸೂಲಿ ಕುರಿತು ಹಣದ ಭದ್ರತೆಗಾಗಿ ದಾವೆಯ ಅಂತಿಮ ಫಲಿತಾಂಶವನ್ನು ಕಾದಿರಿಸಿ ಸದರಿಯವರ ಮತ್ತು ಅವರ ಕಾನೂನು ವಾರಸುದಾರರಾದ ಇಬ್ಬರು ಪತ್ನಿಯರಾದ 1) ಶ್ರೀಮತಿ ಜೀನತ್‌ಬಿ ಮತ್ತು 2) ರಾಮಮ್ಮ ಉರುಫ್ ರಮೀಜಾಬಿ ಇವರುಗಳ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಸಹಕಾರಿ ಕಾಯಿದೆ ಕಲಂ 103ರ ಅಡಿಯಲ್ಲಿ ತೀರ್ಪು ಪೂರ್ವ ಜಪ್ತಿ ಆದೇಶ ನೀಡಬೇಕಾಗಿ ಕೋರಿರುತ್ತಾರೆ. ಈ ನ್ಯಾಯಾಲಯದಲ್ಲಿ ವಿಚಾರಣೆಯಲ್ಲಿರುವ ಅಧಿಭಾರ ಅರ್ಜಿ ಸಂಖ್ಯೆ: 1:2005-06 ರಲ್ಲಿ ಅಂತಿಮ ತೀರ್ಪು ಕಾದಿರಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ಈ ನ್ಯಾಯಾಲಯದ ದಾವೆಯ ತೀರ್ಪುಪೂರ್ವ ಷೆಡ್ಯೂಲ್ ಆಸ್ತಿಯನ್ನು ಜಪ್ತಿ ಮಾಡಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಜಪ್ತಿ ಆದೇಶ**

**ನಂ. ಸ.ಸಂ.ಸ.ನಿ. 33:ಎಬಿಎನ್:ಡಿಡಿಎಸ್: 12:2005-06, ದಿನಾಂಕ: 7ನೇ ಜೂನ್ 2005**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ: 21.11.2001ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿ ಶ್ರೀ ಆರ್. ಲೋಕೇಶ್, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮದುಗಿರಿ ಆದ ನಾನು ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ದಿವಂಗತ ಮುತ್ತುಜ ಮಾಜಿ ವ್ಯವಸ್ಥಾಪಕ, ಸೇವಾ ಸಹಕಾರ ಬ್ಯಾಂಕ್ ನಿ ಚಿಕ್ಕಹಳ್ಳಿ, ಪಾವಗಡ ತಾಲ್ಲೂಕು ಇವರ ಹೆಸರಿನಲ್ಲಿರುವ ಮತ್ತು ಅವರ ಇಬ್ಬರು ಪತ್ನಿಯರು 1) ಶ್ರೀಮತಿ ಜೀನತ್‌ಬಿ ಮತ್ತು 2) ರಾಮಮ್ಮ ಉರುಫ್ ರಮೀಜಾಬಿ ಇವರುಗಳ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೆ ಅಥವಾ ಸ್ವತ್ತಿಗೆ ತತ್ಸಮಾನವಾದ ನಗದು ಭದ್ರತೆ ನೀಡುವವರೆಗೆ, ವಿಲೇವಾರಿ ಮಾಡುವುದೇ ಆಗಲೀ ಪರಭಾರೆ ಮಾಡುವುದಾಗಲೀ ಅಥವಾ ವರ್ಗಾಯಿಸುವುದೇ ಆಗಲಿ ಮಾಡುವಂತಿಲ್ಲ ಒಂದು ವೇಳೆ ಈ ಆದೇಶವನ್ನು ನಿರ್ಲಕ್ಷಿಸಿ ಮಾರಾಟ ಮಾಡಿದರೂ ಈ ಸ್ವತ್ತುಗಳನ್ನು ಖರೀದಿಸಿದಲ್ಲಿ ಪರಭಾರೆ ಮಾಡಿದಲ್ಲಿ ಅಥವಾ ಇನ್ನಾವುದೇ ವಿಧದಲ್ಲಿ ವರ್ಗಾಯಿಸಿಕೊಂಡಲ್ಲಿ ಅದು ಸಾಧುವಾಗುವುದಿಲ್ಲ ಎಂದು ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರಲಾಗಿದೆ.

ದುರುಪಯೋಗಪಡಿಸಿದ ಮುಖ್ಯ ಆರೋಪಿ ದಿವಂಗತ ಮುತ್ತುಜ ರವರ ಕಾನೂನು ವಾರಸುದಾರರು ಈ ಜಪ್ತಿ ಆದೇಶದ ವ್ಯಾಪ್ತಿಯಿಂದ ಹೊರಬರಲು ಇಚ್ಚಿಸಿದಲ್ಲಿ ಜಪ್ತಿಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ತಕ್ಕಷ್ಟು ಮತ್ತು ಈ ನ್ಯಾಯಾಲಯವು ಸರಿಯೆಂದು ಭಾವಿಸಿದ ನಗದು ಭದ್ರತೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿ ಇವರ ಹೆಸರಿನಲ್ಲಿ ತುಮಕೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ. ಮಧುಗಿರಿ ಶಾಖೆ, ಮಧುಗಿರಿ ಈ ಬ್ಯಾಂಕಿನಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ ಈ ಬಗ್ಗೆ ಮೂಲ ಚಲನ್ ಪ್ರತಿಯನ್ನು ದಿನಾಂಕ: 11.7.2005ರ ಒಳಗೆ ಈ ನ್ಯಾಯಾಲಯಕ್ಕೆ ಹಾಜರುಪಡಿಸುವುದರ ಮೂಲಕ ಜಪ್ತಿ ಆದೇಶದಿಂದ ಹೊರಗುಳಿಯಬಹುದೆಂದು ಸಹ ತಿಳಿಸಲಾಗಿದೆ. ಸದರಿ ನಿಗದಿತ ಅವಧಿಯೊಳಗೆ ನಗದು ಭದ್ರತೆ ನೀಡಲು ವ್ಯಾಜ್ಯದ ಎದುರು ಅರ್ಜಿದಾರರು ವಿಫಲರಾದಲ್ಲಿ ಈ ಷರತ್ತು ಪೂರ್ವಕ ಜಪ್ತಿ ಆದೇಶ ಸ್ಥಿರಗೊಳ್ಳುವುದಲ್ಲದೆ ಖಾಯಂಗೊಳ್ಳುವುದು ಎಂದು ತಿಳಿಯತಕ್ಕದ್ದು.

**ಷೆಡ್ಯೂಲ್ ಸ್ವತ್ತು**

| ಕ್ರ. ಸಂ. | ಖಾತೆದಾರರ: ಹಕ್ಕುದಾರನ ಹೆಸರು ಮತ್ತು ವಿಳಾಸ | ಖಾತೆ ನಂ. | ಸರ್ವೆ ನಂ. | ವಿಸ್ತೀರ್ಣ | ತರಹೆ | ಚೆಕ್ಕುಬಂದಿ |
|---|---|---|---|---|---|---|
| 1 | ಜೀನತ್‌ಬಿ ಮತ್ತು ರಾಮಮ್ಮ ಉರುಫ್ ರಮೀಜಾಬಿ ಕೋಂ ಲೇಟ್ ಮುತ್ತುಜ ವೈ.ಎನ್. ಹೊಸಕೋಟೆ, ಪಾವಗಡ ತಾಲ್ಲೂಕು | 1515/37 | ಮನೆ | 40 x 20 | ಮನೆ | ಪೂರ್ವ: ರಸ್ತೆ<br>ಪಶ್ಚಿಮ: ವಾದಿ ಬ್ಯಾಂಕಿನಲ್ಲಿದ್ದಂತೆ<br>ಉತ್ತರ: ವೈ. ರಾಮಾಂಜನೇಯ<br>ದಕ್ಷಿಣ: ಹೆಚ್. ಹನುಮಂತರಾಯಪ್ಪ |
| 2 | ಮುತ್ತುಜ ಬಿನ್ ಇಮಾಂಸಾಬ್ ವೈ.ಎನ್. ಹೊಸಕೋಟೆ, ಪಾವಗಡ ತಾಲ್ಲೂಕು | 100 | 209 | 4-00 | ಖುಷ್ಕಿ | ಪೂರ್ವ: ಜಿನತ್‌ಬಿ ಕೋಂ ಮುತ್ತುಜ<br>ಪಶ್ಚಿಮ: ಭಗವಂತಪ್ಪ ಜಮೀನು<br>ಉತ್ತರ: ಸರ್ಕಾರಿ ಉಳಿಕೆ ಜಮೀನು<br>ದಕ್ಷಿಣ: ಯಲ್ಲಮ್ಮ ಜಮೀನು |
| 3 | ಮುತ್ತುಜ ಬಿನ್ ಇಮಾಂಸಾಬ್ ವೈ.ಎನ್. ಹೊಸಕೋಟೆ ಪಾವಗಡ ತಾಲ್ಲೂಕು | 173 | 251 | 4-00 | ಖುಷ್ಕಿ | ಪೂರ್ವ: ರಾಗಿ ಸೀಮ ತಿಮ್ಮಯ್ಯ<br>ಪಶ್ಚಿಮ: ಕೆಂಚಗಾನಹಳ್ಳಿ ರಾಮಣ್ಣ<br>ಉತ್ತರ: ಮುತ್ತುಜ ಜಮೀನು<br>ದಕ್ಷಿಣ: ಯಲ್ಲಮ್ಮ ಜಮೀನು |

ಈ ಆದೇಶವನ್ನು ನನ್ನ ಸ್ವ ಹಸ್ತಾಕ್ಷರ ಹಾಗೂ ನ್ಯಾಯಾಲಯದ ಮೊಹರಿನೊಂದಿಗೆ ದಿನಾಂಕ: 7.6.2005 ರಂದು ನೀಡಿರುತ್ತೇನೆ.

**ಆರ್. ಲೋಕೇಶ್**

ಪಿ.ಆರ್. 957

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪ ವಿಭಾಗ, ಮಧುಗಿರಿ